ಶ್ರೀಶೈಲ ಕುಮಾರೀ ಗ್ರಂಥಮಾಲಾ—ಮೂವತ್ತೆರಡನೆಯ ಕುಸುಮ

# ಪಾಶುಪತಾಸ್ತ್ರ

ಲೇಖಕರು

ವಿದ್ಯಾವಿಭೂಷಣ

ಲಿಂಗಣ್ಣಯ್ಯ, ಬಿ.ಎ., (ಆನರ್ಸ್)



ಪ್ರಕಾಶಕರು

ಅಭ್ಯುದಯ ಸಾಹಿತ್ಯ ಮಂದಿರ

ಶಂಕರಮಠದ ಬೀದಿ, ಮೈಸೂರು—೪.

ಕಾಶೀ ಶ್ರೀ ಶ್ರೀ ಮಹಾಪ್ರಭು ಜಗದ್ಗುರುಗಳ ದಿವ್ಯ
ಸನ್ನಿಧಿಯಲ್ಲಿ:- ಅರ್ಪಣೆ:
-(ಓ. ಎನ್. ಲಿಂಗಣ್ಣಯ್ಯ)

# ಪಾಶುಪತಾಸ್ತ್ರ

(ನಿರುಗಲಮಠ)
ಮೈಸೂರು 4

17-2-1976
(ಮೊಕ್ಕಾಂ) ಚಿತ್ರದುರ್ಗ

ಲೇಖಕರು:
ವಿದ್ಯಾವಿಭೂಷಣ
ಓ. ಎನ್. ಲಿಂಗಣ್ಣಯ್ಯ, ಬಿ.ಎ., (ಆನರ್ಸ್)

ಪ್ರಕಾಶಕರು
ಅಭ್ಯುದಯ ಸಾಹಿತ್ಯ ಮಂದಿರ
ಶಂಕರಮಠದ ಬೀದಿ, ಮೈಸೂರು-೪.

[ಬೆಲೆ ರೂ. 3-00]

ಮೊದಲನೆಯ ಮುದ್ರಣ: ೧೯೭೩





ನಾಟ್ಯಂ ಭಿನ್ನರುಚೇರ್ಜನಸ್ಯಬಹುಧಾ ಪ್ಯೇಕಂಸಮಾರಾಧನಂ

—ಮಹಾಕವಿ ಕಾಳಿದಾಸ



ಮುದ್ರಕರು
ಮಿತ್ರ ಪ್ರಿಂಟರ್ಸ್
ವಿದ್ಯಾರಣ್ಯಪುರಂ, ಮೈಸೂರು–೫೭೦೦೦೮

ಈ ನಾಟಕ

ನನ್ನ ಪ್ರೀತಿಯ ಮಗಳು

ಚಿ|| ಶ್ರೀಶೈಲಕುಮಾರಿಯ

ನೆನಪಿಗೆ ಮೀಸಲು

## ಮುನ್ನುಡಿ

ಹಿರಿಯ ಮಿತ್ರರಾದ ಶ್ರೀ ಓ. ಎನ್. ಲಿಂಗಣ್ಣಯ್ಯನವರ ಈ ನಾಟಕಕ್ಕೆ ಪರಿಚಯ ರೂಪದ ನನ್ನ ಮುನ್ನುಡಿ ಬೇಕಾಗಿಲ್ಲ. ನನಗಿಂತ ಮುಂಚೆಯೇ ಅವರು ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದವರು. ನಾನು ಆ ಕ್ಷೇತ್ರದಲ್ಲಿ ತಿಪ್ಪ ತಿಪ್ಪ ಹೆಜ್ಜೆಯಿಡುತ್ತಿದ್ದಾಗಲೆ ಸಾಹಿತಿ ಎಂದು ಪ್ರಸಿದ್ಧರಾಗಿದ್ದವರು ; ಕವಿತೆ ನಾಟಕ ಜೀವನ ಚರಿತ್ರೆಗಳನ್ನು ರಚಿಸಿ ಭಾಷಣಗಳ ಮೂಲಕ ಸಾಹಿತ್ಯಾಮೃತ ವನ್ನು ಜನಸಾಮಾನ್ಯಕ್ಕೆ ನೀಡಿ ಕನ್ನಡ ಸಾಹಿತ್ಯಕ್ಕೆ ಈ ಹಲವಾರು ರೀತಿಗಳಲ್ಲಿ ಸೇವೆ ಸಲ್ಲಿಸಿರುವ ಮಹನೀಯರಿವರು. ಬಿಡುವಿಲ್ಲದ ಆಡಳಿತ ಯಂತ್ರದಲ್ಲಿ ಕೈ ಹಾಕಿಕೊಂಡಿದ್ದರೂ, ಸಾಹಿತ್ಯೋಪಾಸನೆಗೆ ಮನವನ್ನು ತೆತ್ತು ಎರಡನ್ನೂ ನಿಷ್ಠೆಯಿಂದ ದಕ್ಷತೆಯಿಂದ ನಿರ್ವಹಿಸಿದ ವಿರಳ ವ್ಯಕ್ತಿಗಳಲ್ಲಿ ಇವರೊಬ್ಬರು. ಪುರುಷ–ಶಕ್ತಿಗಳಂತೆ ಅಧಿಕಾರ ಸಾಹಿತ್ಯಗಳು ಪರಸ್ಪರ ಪೂರಕ, ಒದಕ್ಕೊಂದು ಭೂಷಣ. ಆಡಳಿತದಲ್ಲಿ ಅವರು ಸಾಧಿಸಿದ ಯಶಸ್ಸಿಗೆ ಅವರ ಕಾವ್ಯ ಶಕ್ತಿಯೇ ಕಾರಣ. ಅವರ ವಾಗ್ಮಿತೆಯನ್ನು ಮೆಚ್ಚದವರಿಲ್ಲ. ಅವರು ಗಳಿಸಿರುವ ಜನಾನು ರಾಗಕ್ಕೆ ಇದೂ ಒಂದು ಕಾರಣ. ಹೀಗೆ ಆತ್ಮಶಕ್ತಿಯಿಂದಲೆ ವಿರಾಜಿಸಬಲ್ಲ ಶ್ರೀ ಲಿಂಗಣ್ಣಯ್ಯನವರಿಗೆ ನನ್ನ ಪರಿಚಯ ಪತ್ರ ಅನಗತ್ಯ. ಬಹು ದಿನಗಳಿಂದ ಅವರು ನನ್ನ ಮೇಲಿಟ್ಟಿರುವ ವಿಶ್ವಾಸಕ್ಕಾಗಿ, ಅವರ ಸೌಜನ್ಯ ಸೌಶೀಲ್ಯ ನಿರ ಸೂಯತೆಯೆ ಮೊದಲಾದ ಸದ್ಗುಣಗಳಿಗೆ ಮಾರು ಹೋಗಿ ಈ ಮುಂದಿನ ಒಂದೆರಡು ಮಾತುಗಳನ್ನು ಬರೆಯುತ್ತಿದ್ದೇನೆ.

ಪಾಶುಪತಾಸ್ತ್ರ ಶ್ರೀ ಲಿಂಗಣ್ಣಯ್ಯನವರ ಮೂರನೆಯ ನಾಟಕ. ವಸ್ತು ಪೌರಾಣಿಕವಾದದ್ದು ; ಶಿವನ ಕಿರಾತ ರುದ್ರಲೀಲೆಗೆ ಸಂಬಂಧಿಸಿದ್ದು. ಈ ವಸ್ತು ಅತ್ಯಂತ ಪ್ರಾಚೀನವಾದದ್ದು. ಮಹಾಭಾರತದ ಕಾಲದಿಂದ ಭಾರತೀಯ ರಿಗೆ ಅಚ್ಚು ಮೆಚ್ಚಾಗಿರುವ ವಸ್ತು. ಅಲ್ಲಿಂದೀಚೆಗೆ ಅನೇಕ ಸಂಸ್ಕೃತ ಮತ್ತು ಕನ್ನಡ ಕವಿಗಳು ಆ ವಸ್ತುವನ್ನು ಬಳಸಿಕೊಂಡು ಯುಗಧರ್ಮಕ್ಕೆ ತಕ್ಕಂತೆ ತಂತಮ್ಮ ದರ್ಶನಕ್ಕೆ ತಕ್ಕಂತೆ ವಸ್ತುವನ್ನು ಮಾರ್ಪಡಿಸಿಕೊಂಡು ಕಾವ್ಯ ನಾಟಕಗಳನ್ನು ಬರೆದು ಕೀರ್ತಿವಂತರಾಗಿದ್ದಾರೆ. ಪ್ರಕೃತ ನಾಟಕಕಾರರೂ ಹಳೆಯ ವಸ್ತುವನ್ನವಲಂಬಿಸಿದ್ದರೂ ಪಾತ್ರ ಸಂಮೇಲನ ಹಾಗೂ ರಚನೆಯಲ್ಲಿ

ಮತ್ತು ವಸ್ತುವಿನ್ಯಾಸದಲ್ಲಿ ಹಲವಾರು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ನಾಟಕಕ್ಕೆ ಹೆಸರನ್ನಿಡುವುದರಲ್ಲಿಯೇ ನಾಟಕೋದ್ದೇಶ ಧ್ಯೇಯಗಳನ್ನೂ ವೈಶಿಷ್ಟ್ಯವನ್ನೂ ಅವರು ವ್ಯಕ್ತ ಪಡಿಸಿದ್ದಾರೆ. ಹಿಂದಿನ ಸಂಸ್ಕೃತ ಮತ್ತು ಕನ್ನಡ ಕವಿಗಳು ತಂತಮ್ಮ ಕೃತಿಗಳಿಗೆ ಕಿರಾತಾರ್ಜುನೀಯ, ಕಿರಾತ ರುದ್ರ ಲೀಲೆ, ಶಬರಶಂಕರ ವಿಳಾಸ ಮೊದಲಾದ ಹೆಸರುಗಳನ್ನಿಟ್ಟು ತಮ್ಮ ಧ್ಯೇಯ ದರ್ಶನಗಳ ಸ್ವರೂಪವನ್ನು ಪ್ರಕಾಶ ಪಡಿಸಿದ್ದಾರೆ. ಪಾಶುಪತಾಸ್ತ್ರ ತಪದ ಮಹತ್ವವನ್ನೂ ಅರ್ಜುನ ಪಾತ್ರದ ಹಿರಿಮೆಯನ್ನೂ ಎತ್ತಿ ತೋರಿಸುತ್ತದೆ.

ಈ ಮೂರು ಅಂಕಗಳ ನಾಟಕ ದ್ವಾಪರಯುಗಪುರುಷ ಹಿಮಾಲಯದಲ್ಲಿ ಮಾನಸಸರೋವರದಲ್ಲಿ ಮಿಂದು ಮಡಿಯುಟ್ಟು ಮಂಜುಲಿಂಗವನ್ನು ಪೂಜಿಸಿ ಧ್ಯಾನಾಸಕ್ತನಾಗಿರುವ ದೃಶ್ಯದಿಂದ ಪ್ರಾರಂಭವಾಗಿ, ಎರಡನೆಯ ದೃಶ್ಯದಲ್ಲಿ ಗಣಪತಿ ನಂದೀಶ್ವರರ ಸಮಾಗಮವನ್ನು ಸೂಚಿಸಿ, ನಾಟಕಕಾರರು ಎರಡು ಕಾರ್ಯಗಳನ್ನು ಏಕಕಾಲದಲ್ಲಿ ಸಾಧಿಸಿದ್ದಾರೆ. ಒಂದು ಗಣಪತಿಯನ್ನೇ ರಂಗದ ಮೇಲೆ ತಂದು ನಾಂದಿಯನ್ನು ಪೂರೈಸಿದ್ದಾಗಿದೆ ; ಎರಡು, ಗಣಪತಿಯ ಬಾಯಿಂದಲೆ ಕಥೆಯ ಸೂಚನೆಯನ್ನು ಹೇಳಿಸಿದ್ದಾಗಿದೆ. ಮುಂದಿನ ಎರಡು ದೃಶ್ಯಗಳಲ್ಲಿ ಅಗಸ್ತ್ಯ ಜಮದಗ್ನಿ ಕಶ್ಯಪ ದಧೀಚಿ ಗೌತಮ ಸಾನಂದ ಮೊದಲಾದ ಮುನಿಗಳ ಮೂಲಕ ತಾಯ್ನಾಡಿನ ವೈಭವವನ್ನು ಹಾಗೂ ಪ್ರಚಲಿತ ವೈಜ್ಞಾನಿಕಯುಗದ ಸಿದ್ಧಿಗಳ ಮಹಿಮೆಯನ್ನು ಪ್ರಕಾಶಪಡಿಸುತ್ತಾರೆ. ಅರ್ಜುನನ ತಪಸ್ಸಿನ ವೃತ್ತಾಂತವನ್ನು ಶಿವನಿಗೆ ಮುಟ್ಟಿಸುವ ಸಂಗತಿಯೂ ಬರುತ್ತದೆ. ನಾಲ್ಕು ಮತ್ತು ಐದನೆಯ ದೃಶ್ಯಗಳಲ್ಲಿ ಪಾಂಡವರು ಹಾಗೂ ಧೌಮ್ಯ ವೇದ ವ್ಯಾಸರ ನಡುವೆ ನಡೆಯುವ ಸಂಭಾಷಣೆಯಿಂದ ಇಡೀ ಮಹಾಭಾರತದ ಕಥೆಯ ಪರಿಚಯವಾಗುತ್ತದೆ. ಇಲ್ಲಿಗೆ ಮೊದಲನೆಯ ಅಂಕ ಮುಕ್ತಾಯ ವಾಗುತ್ತದೆ. ಅರ್ಜುನ ಅಣ್ಣ ತಮ್ಮಂದಿರಿಂದ ಹಾಗೂ ಮಡದಿಯಿಂದ ಬೀಳ್ಕೊಳ್ಳುವ ಸಂದರ್ಭದಿಂದ ಎರಡನೆಯ ಅಂಕ ಪ್ರಾರಂಭವಾಗುತ್ತದೆ. ಅವನ ತಪಸ್ಸನ್ನು ಕೆಡಿಸಲು ಎಂದಿನಂತೆ ಅಪ್ಸರ ಸ್ತ್ರೀಯರು ಬರುತ್ತಾರಷ್ಟೆ. ಅವರನ್ನು ನೇರವಾಗಿ ರಂಗಮಂಟಪದ ಮೇಲೆ ತರದೆ ಪುಷ್ಪರಥ ಮತ್ತು ಚಿತ್ರ ಚೂಡರೆಂಬ ಗಂಧರ್ವ ಮಿತ್ರರ ಸಂಭಾಷಣೆಯ ಮೂಲಕ ಅವರ ಲೀಲೆ ಓದು ಗರ ಅಥವಾ ವಾಚಕರ ಮನಕ್ಕೆ ಮುಟ್ಟುವಂತೆ ವರ್ಣಿಸುತ್ತಾರೆ. ಮುಂದೆ

ಜಂಗಮ ರೂಪದಿಂದ ಇಂದ್ರ ಬಂದು ಅರ್ಜುನನನ್ನು ಹರಸುವುದು, ಶಬರ ವೃಂದ ಪರಿವೃತನಾದ ಶಿವ ಹಂದಿಯನ್ನು ಬೇಟೆಯಾಡುವುದು, ಶಿವಾರ್ಜುನ ಸಂವಾದ ಹಾಗೂ ಅವರ ಯುದ್ಧ ಅರ್ಜುನನ ಇಷ್ಟಾರ್ಥವನ್ನು ಈಡೇರಿಸುವುದು—ಈ ಪ್ರಕರಣಗಳು ಮಾಮೂಲಾಗಿ ಜರಗುತ್ತವೆ.

ಇಲ್ಲಿ ನಾಟಕಕಾರರು ಅನೇಕ ಹೊಸ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಅಗಸ್ತ್ಯ ಜಮದಗ್ನಿ ಮೊದಲಾದ ಮುನಿಗಳು, ಗಂಧರ್ವಮಿತ್ರರು ಸೌಮ್ಯ–ವನ ವೇಣಿಯರು ಇವರೆಲ್ಲ ಹೊಸಬರು ; ಹೊಸ ಪಾತ್ರಗಳಿಂದ ಕತೆಯಲ್ಲಿ ಬರುವ ಸಂದರ್ಭಗಳೂ ಬದಲಾವಣೆಯಾಗುತ್ತವೆ. ಪ್ರೇಮ ಜಾತಿಯತೆಯ ಕಟ್ಟು ನಿಟ್ಟುಗಳನ್ನು ಸಹ ಒತ್ತರಿಸುತ್ತದೆನ್ನುವುದನ್ನು ತಿಳಿಸುವ ಸಲುವಾಗಿ ಸೌಮ್ಯ-ವನವೇಣಿಯರ ಪಾತ್ರಗಳನ್ನು ಸೃಷ್ಟಿಸಿದೆಯೇ ಹೊರತು ಮುಖ್ಯ ಕಥೆಗೆ ಇವುಗಳಿಂದ ಏನೂ ಪ್ರಯೋಜನವಿಲ್ಲವೆಂಬುದು ಸ್ಪಷ್ಟ. ಅಪ್ಸರೆಯರ ಜಿಲ್ಲಾಟದ ಹಾಗೂ ಬೇಟೆಯ ವರ್ಣನೆಗೆ ಗಂಧರ್ವ ಮಿತ್ರರನ್ನು ಸಾಧನವಾಗಿರಿಸಿಕೊಂಡದ್ದು ನಾಟಕಕಾರರ ಜಾಣ್ಮೆಗೂ ತಂತ್ರದ ವೈಶಿಷ್ಟ್ಯಕ್ಕೂ ಸಾಕ್ಷಿಯಾಗಿದೆ. ಕಥಾ ನಿರೂಪಣೆಯ ಮತ್ತು ಪೋಷಣೆಯ ದೃಷ್ಟಿಯಿಂದ ಕಶ್ಯಪ ಜಮದಗ್ನ್ಯಾದಿ ಮುನಿಗಳ ಆಗಮನದ ಅಗತ್ಯತೆ ಸ್ಪಷ್ಟವಾಗಿಲ್ಲದಿದ್ದರೂ ಅವರ ಸಂಭಾಷಣೆಯಲ್ಲಿ ಮೈದೋರುವ ವೈಜ್ಞಾನಿಕ ಯುಗದ ಮಹಿಮೆ ಹಾಗೂ ತಾಯ್ನಾಡಿನ ಸೌಂದರ್ಯ ಮನೋಜ್ಞವಾಗಿದೆ.

ಕಲಿಯುಗದಲ್ಲಿ ವಿಜ್ಞಾನ ದರ್ಶನವೆ ಬ್ರಹ್ಮ ಸಾಕ್ಷಾತ್ಕಾರ ಮಾರ್ಗವೆನ್ನುವುದನ್ನೂ ವಿಜ್ಞಾನಿಗಳೇ ಇಂದಿನ ಋಷಿ ವೃಂದವೆನ್ನುವುದನ್ನೂ ಜಮದಗ್ನಿಯ ಬಾಯಿಂದ ಸೊಗಸಾಗಿ ಹೇಳಿಸಿದ್ದಾರೆ. ಕಶ್ಯಪ ಹೇಳುವ ಕೆಳಗಿನ ಮಾತಿನಲ್ಲಿ ಶ್ರೀ ಲಿಂಗಣ್ಣಯ್ಯನವರ ದೇಶಾಭಿಮಾನ ಸ್ಫುಟಗೊಂಡಿದೆ.

ತವರ್ನಾಡ ನೆನಪಿನಲಿ ಸವಿಯುಂಟು ಹಿತವುಂಟು
ಪಡೆದ ಜನನಿಯ ಮಡಿಲ ಬಾಳಿನಲಿ ಸುಖವುಂಟು
ಹಿತವುಂಟು ! ಕೈಲಾಸ ವೈಕುಂಠದಿಂದೇನು ?
ತವರೂರು ನಮಗಿರಲಿ ತಾಯ್ನಾಡು ಸೊಗವಿರಲಿ !

ಮಹಾಭಾರತಾದಿ ಕಾವ್ಯಗಳಲ್ಲಿ ಬರುವ ಸುಭಾಷಿತಾವಳಿಗಳ ಬಳಕೆಯಿಂದ

ಅವರ ಪುರಾಣ ಪ್ರಜ್ಞೆ ಸುಪ್ರಕಟವಾಗುವುದಲ್ಲದೆ, ಕನ್ನಡಕ್ಕೊಂದು ಕೋಡು ಮೂಡಿದಂತಾಗಿದೆ. ನಿದರ್ಶನಾರ್ಥವಾಗಿ ಸಹದೇವನ ಮಾತಿನ ಭಾಗವನ್ನಿಲ್ಲಿ ಉದ್ಧರಿಸಬಹುದು.

ಸತ್ಯವೆಂಬುದು ತಾಯಿ ಸುಜ್ಞಾನವೇ ತಂದೆ
ಧರ್ಮವೇ ಸಹೋದರ ದಯೆಯೆ ಮಿತ್ರ ಶಾಂತಿಯೆ
ನಿಜಪತ್ನಿ ಮತ್ತೆ ಕ್ಷಮೆಯೇ ಸುತರೆಂಬುದನು
ಮರೆಯಲಾಪುದೆ ಕಷ್ಟ ಸಮನಿಸಲು ಲೋಕದಲ್ಲಿ

ಸರಳ ರಗಳೆಯನ್ನು ಮೊಟ್ಟ ಮೊದಲು ನಾಟಕಕ್ಕೆ ಯಶಸ್ವಿಯಾಗಿ ಅಳವಡಿಸಿ ಕೊಂಡವರು ಶ್ರೀ ಕುವೆಂಪು ಅವರು. ಸಂಕೋಚ ವ್ಯಾಕೋಚ ಶಕ್ತಿಗಳೇ ಅದರ ವೈಶಿಷ್ಟ್ಯ. ಅದು ಬೇಕಾದಾಗ ಹಿಗ್ಗಬಲ್ಲದು. ಬೇಡವಾದಾಗ ಕುಗ್ಗ ಬಲ್ಲದು. ನಾಗಾಲೋಟದಲ್ಲಿ ಹರಿಯಬಲ್ಲುದು, ಮಂದವಾಗಿ ಹೆಜ್ಜೆ ಹಾಕ ಬಲ್ಲುದು; ಅದರಲ್ಲಿ ವೃತ್ತದಪ್ರೌಢಿಮೆಯನ್ನೂ, ಕಂದಗಳ ಬನಿಯನ್ನೂ ಷಟ್ಪದಿ ಗಳ ಸೌಕುಮಾರ್ಯವನ್ನೂ ಸುಲಭವಾಗಿ ತರಬಹುದು. ನಾಟಕಕಾರರು ಇದನೆಲ್ಲ ಇಲ್ಲಿ ಯಶಸ್ವಿಯಾಗಿ ಸಾಧಿಸಿದ್ದಾರೆ. ಅದು ಹೇಗೆ ಚಂಪೂ ಶೈಲಿಯ ಧೀರೋದಾತ್ತ ಶೈಲಿಯನ್ನು ಸಹ ಸಾಧಿಸಬಲ್ಲುದೆಂಬುದಕ್ಕೆ ಒಂದು ಉದಾ ಹರಣೆಯನ್ನು ಈ ನಾಟಕದಿಂದಲೆ ಕೊಡಬಹುದಾಗಿದೆ.

..........................ವಿಭೂತಿ ಭೂಷಿತ ಮಹಾ
ವಿಸ್ಫುರಿತ ಶಿವಾಕ್ಷಮಾಲ್ಯವಪುವೆತ್ತ ಮೇಣ್
ನಿಬದ್ಧನಿಷಂಗ ಚಾಪವಲ್ಲರಿ ಮಿಸುಪಂಗ
ವೆತ್ತ ಘನಶಾಂತದುನ್ನತಿಯೆತ್ತ?

ಮೂರನೆಯ ಅಂತದಲ್ಲಿ ಆರು ದೃಶ್ಯಗಳಿವೆ. ಮೊದಲನೆಯ ದೃಶ್ಯದಲ್ಲಿ ಪ್ರಕೃತಿ ಸೌಂದರ್ಯವನ್ನು ಲೇಖಕರು ತುಂಬ ಮನೋಜ್ಞವಾಗಿ ಚಿತ್ರಿಸಿರುತ್ತಾರೆ. ಎರಡನೆಯ ದೃಶ್ಯದಲ್ಲಿ ಅರ್ಜುನನು ಋಷಿಗಳನ್ನೂ ತರುಲತೆಗಳನ್ನೂ ಮೃಗ ಪಕ್ಷಿಗಳನ್ನೂ ಬೀಳ್ಕೊಂಡು ಮಾತಲಿಯೊಂದಿಗೆ ದೇವಲೋಕಕ್ಕೆ ಪ್ರಯಾಣ ಮಾಡುವ ಸನ್ನಿವೇಶ ಹೃದಯಂಗಮವಾಗಿದೆ. ಅಮರಾವತಿಯಲ್ಲಿ ಅರ್ಜುನನು ಊರ್ವಶಿಯ ಶಾಪದಿಂದ ಮನನೊಂದರೂ ತನ್ನ ನಿರ್ಮಲ ಪ್ರೇಮವನ್ನು

ವ್ಯಕ್ತಪಡಿಸುತ್ತಾನೆ. ಉಳಿದ ನಾಲ್ಕು ದೃಶ್ಯಗಳಲ್ಲಿ ದೇವೇಂದ್ರನ ಆಸ್ಥಾನ ವೈಭವ, ದೇವಲೋಕದ ವರ್ಣನೆ ಮತ್ತು ನಿವಾತಕವಚರೆಂಬ ರಾಕ್ಷಸರ ಸಂಹಾರದ ಹಿನ್ನೆಲೆಗಳನ್ನು ಶ್ರೀ ಲಿಂಗಣ್ಣಯ್ಯನವರು ನಿರೂಪಿಸಿರುತ್ತಾರೆ. ಅರ್ಜುನನ ಸಾಹಸ, ಪರಾಕ್ರಮ, ಮನಸ್ಥೈರ್ಯ, ನೀತಿನೈರ್ಮಲ್ಯ ಗುಣ ಗಳನ್ನು ಈ ನಾಟಕದಲ್ಲಿ ನಾಟಕಕಾರರು ಗಂಭೀರ ಶೈಲಿಯಲ್ಲಿ ಮನ ಮೆಚ್ಚುವಂತೆ ಬೇರೆ ಬೇರೆ ಪಾತ್ರಗಳಿಂದ ಹೇಳಿಸಿರುತ್ತಾರೆ. ಇದೊಂದು ಉತ್ತಮವಾದ ನಾಟಕ. ಶ್ರೀಲಿಂಗಣ್ಣಯ್ಯನವರು ನೂರು ಕಾಲ ಚೆನ್ನಾಗಿ ಬಾಳುವಂತೆ, ಬಾಳಿ ಕನ್ನಡ ನಾಡುನುಡಿಗಳಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸುವಂತೆ ಭುವನೇಶ್ವರಿ ಹರಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ಕುಲಪತಿಭವನ
ತಾ. ೬-೬-೧೯೭೩

ದೇಜಗೌ

**ಪು. ತಿ. ನರಸಿಂಹಾಚಾರ್**

೭೪, ೨ನೇ ಮೇನ್, ಜಯಲಕ್ಷ್ಮೀಪುರಂ
ಮೈಸೂರು
ತಾರೀಖು ೧೧-೬-೭೩

ಪ್ರಿಯ ಲಿಂಗಣ್ಣಯ್ಯನವರಲ್ಲಿ ವಿಜ್ಞಾಪನೆಗಳು. ತಾವು ವಿಶ್ವಾಸದಿಂದ ಕೊಟ್ಟ 'ಪಾಶುಪತಾಸ್ತ್ರ' ಎಂಬ ನಾಟಕವನ್ನು ಆಮೂಲಾಗ್ರವಾಗಿ ಓದಿ ಸಂತೋಷಪಟ್ಟೆ. ಶ್ರೀಮಾನ್ ಜವರೇಗೌಡ ಅವರು ಒಳ್ಳೆಯ ವಿಮರ್ಶಾತ್ಮಕವಾದ ಮುನ್ನುಡಿಯನ್ನು ಬರೆದಿದ್ದಾರೆ. ಅವರು ಒಳ್ಳೆಯ ಸಹೃದಯರು. ನಾಟಕ ಬಿಡದೆ ಓದಿಸಿಕೊಳ್ಳುವಂತಹ ನಾಟಕ. ಕಥೆ ಹಳೆಯದು ಮತ್ತು ಎಲ್ಲರಿಗೂ ಗೊತ್ತಿರುವಂಥದು. ಅನೇಕ ಪ್ರತಿಭಾಶಾಲಿಗಳು ಅದರ ಮೇಲೆ ಕೈಯಾಡಿಸಿದ್ದಾರೆ. ಇದನ್ನು ರುಚಿಕರವಾಗಿ ತಾವು ಮರಳಿ ಸೃಷ್ಟಿಸಿರುವುದು ಅಭಿನಂದನೀಯವಾದುದು. ಸರಳ ರಗಳೆ ಸರಸವಾಗಿ ಓಡುತ್ತದೆ. ಮಾತು ವಿಷಯದ ಗಾಂಭೀರ್ಯಕ್ಕೆ ತಕ್ಕಂತಿದೆ. ಋಷಿಗಳ ಸ್ತುತಿರೂಪವಾದ ವಾಕ್ಯಗಳಲ್ಲಿ ಶಿವಶಿವೆಯರ ಸಾನ್ನಿಧ್ಯ ನಮ್ಮ ಮನಸ್ಸಿನಲ್ಲಿ ಬಹು ಚೆನ್ನಾಗಿ ಕಲ್ಪಿತವಾಗುತ್ತದೆ. ಆ ಭಾಗ ತುಂಬ ಮನೋಜ್ಞವಾಗಿದೆ. ತಪಸ್ವಿಗಳಿಗೂ ತಾಪವನ್ನು ಕೊಡುವ ಅರ್ಜುನನ ತಪಸ್ಸಿಗೂ ಸಮೀಚೀನವಾದ ಮಾತುಗಳು ತಮ್ಮಿಂದ ದೊರೆತಿವೆ. ಅದರಲ್ಲೂ "ಹಿಮಕರನ ಬೆಳಕೆಲ್ಲ ಹಬೆಯಾಯ್ತು" ಎಂಬುದು ಬೆರಗನ್ನು ಹುಟ್ಟಿಸುವ ಕಲ್ಪನೆ. ತಮ್ಮದು ಎಷ್ಟಾದರೂ ಪಳಗಿದ ಕೈ. ಆಸ್ತಿಕ್ಯದಲ್ಲಿ ನೆನೆದು ಮೃದುವಾದ ಮನಸ್ಸು. ಈ ಕಾವ್ಯನಾಟಕ ಚೆನ್ನಾಗಿದೆ ಎಂದರೆ ಅದು ಬರಿ ಉಪಚಾರದ ಮಾತಾಗುತ್ತದೆ. ಹಾರ್ದ ಅಭಿನಂದನೆಗಳು. ಇಂಥ ಸತ್ಕೃತಿಗಳ ಪ್ರವರ್ತನೆಯಿಂದ ತಮ್ಮ ಇಳಿ ವಯಸ್ಸು ತಮಗೆ ಭಾರವಾಗದೆ ಕಾಂತಿಯುಕ್ತವಾಗುತ್ತದೆ. ಹೆಚ್ಚು ಬರೆಯಲಾರೆ. ವಿಶ್ವಾಸಕ್ಕೆ ಚಿರಋಣಿ.

ಇತಿ ವಿಜ್ಞಾಪನೆಗಳು
**ಪು. ತಿ. ನರಸಿಂಹಾಚಾರ್**

ಹರಿದಾಸ ಸಾಹಿತ್ಯ ಸೇವಾಪ್ರಸಕ್ತ
**ಜಿ. ವರದರಾಜರಾವ್**, ಎಂ. ಎ., ಪಿಎಚ್. ಡಿ.
ಕನ್ನಡ ಉಪಪ್ರಾಧ್ಯಾಪಕರು
ಮೈಸೂರು ವಿಶ್ವವಿದ್ಯಾನಿಲಯ

'ಸುದರ್ಶನ'
೧೨ನೆಯ ಅಡ್ಡಬೀದಿ
ಜಯನಗರ—ಮೈಸೂರು-೯

ತಾ. ೧೫—೬—೧೯೭೩

ಮಾನ್ಯಮಿತ್ರರಾದ ಶ್ರೀ ಓ. ಎನ್. ಲಿಂಗಣ್ಣಯ್ಯನವರು ಮಹಾಭಾರತದಲ್ಲಿ ಉಕ್ತವಾಗಿರುವ ಸುಪ್ರಸಿದ್ಧವಾದ 'ಕಿರಾತಾರ್ಜುನೀಯ' ಪ್ರಸಂಗವನ್ನು ಕುರಿತು ಈ ನಾಟಕವನ್ನು ಬರೆದಿರುವುದು ಸಂತೋಷಪ್ರದವಾದ ಸಂಗತಿ. ಭಾರವಿಯ ಸಂಸ್ಕೃತದ 'ಕಿರಾತಾರ್ಜುನೀಯ' ಎಷ್ಟು ಚಮತ್ಕಾರಯುಕ್ತವಾದ ಕಠಿನಕಾವ್ಯವೋ ಷಡಕ್ಷರಿಯ 'ಶಬರಶಂಕರವಿಲಾಸ'ವೂ ಸಹ ಅಷ್ಟೇ ಪ್ರೌಢವಾದ ಕನ್ನಡದ ಚಂಪೂಕೃತಿ. ಈ ಘಟನೆಯನ್ನು ಪ್ರಾಸಂಗಿಕವಾಗಿ ಚಿತ್ರಿಸುವ ಪಂಪನ ನಿರೂಪಣೆಯಾಗಲಿ ಕುಮಾರವ್ಯಾಸನ ರಚನೆಯಾಗಲಿ ತುಂಬ ಆಹ್ಲಾದಕಾರಿಯಾಗಿದೆ. ಪ್ರಕೃತದಲ್ಲಿ ಶ್ರೀ ಓ. ಎನ್- ಲಿಂಗಣ್ಣಯ್ಯನವರು ಈ ವಿಷಯವನ್ನು ಸಲೆಳರಗಳೆಯ ನಾಟಕ ಪ್ರಕಾರಕ್ಕೆ ಅಳವಡಿಸಿರುವುದು ಒಂದು ನವೀನ ರೀತಿಯೇ ಸರಿ. ಇಂದ್ರಾಂಶನಾದ ಅರ್ಜುನನು ಸಾಕ್ಷಾತ್ ಪರಶಿವನನ್ನೇ ಪ್ರತಿಭಟಿಸಿದನೆಂಬ ಕಲ್ಪನೆ ಎಲ್ಲಕಾಲಕ್ಕೂ ರೋಮಾಂಚಕವಾದುದೇ ಸರಿ. ಆದುದರಿಂದಲೇ ನೇಮಿಚಂದ್ರನು "........ಹರನಂನರನೊತ್ತಿ ಗಂಟಲಂ ಮೆಟ್ಟುಗೆ ಮೆಟ್ಟಿದಿರ್ಕೆ ಕವಿಗಳ್ ಕೃತಿಬಂಧದೊಳಲ್ತೆ....ಮೆಟ್ಟಿದರ್" ಎಂದು ಹೇಳಿ ಕವಿಗಳ ಅಗ್ಗಳಿಕೆಯನ್ನೇ ಪಶಂಸಿರುತ್ತಾನೆ

ಪ್ರಕೃತನಾಟಕದಲ್ಲಿ ಒಂದು ಕಡೆ ಅರ್ಜುನನು ಕಾಮಾರಿಯನ್ನು ಗೆದ್ದು ಪಾಶುಪತಾಸ್ತ್ರವನ್ನು ಪಡೆಯುವುದು ಮಾತ್ರವಲ್ಲದೆ ಮತ್ತೊಂದುಕಡೆ ಹರವೈರಿಯಾದ ಕಾಮನನ್ನು ಗೆಲ್ಲುವ ಊರ್ವಶೀ ಪ್ರಸಂಗವೂ ಅಡಕವಾಗಿದೆ. ವೀರವರ್ಚಸ್ವಿಯಾದ ಅರ್ಜುನನ ತಪೋವೇಷ ಎಷ್ಟು ಕುತೂಹಲಕಾರಿಯಾದುದೋ ತರುಣ ತೇಜಸ್ವಿಯಾದ ಆತನ ಇಂದ್ರಿಯನಿಗ್ರಹವೂ ಸಹ ಅಷ್ಟೇ ಮಿಗಿಲಾದುದು. ಮಾನವನೇತ್ರರ ಮುಗಿಲಾಚೆಗೂ ಚಾಚುತ್ತಿರುವ ಆಧುನಿಕ ವೈಜ್ಞಾನಿಕ ಪ್ರಗತಿಯನ್ನು ತಮ್ಮ ನಾಟಕದಲ್ಲಿ ಸೂಚ್ಯವಾಗಿ

ಲಕ್ಷಿಸಿ, ಲೇಖಕರು ಅರ್ಜುನನ ಈ ವಿಜಯ ಪ್ರಸಂಗವನ್ನು ಬಹಳ ಸಾಂಕೇತಿಕ ವಾಗಿ ಪ್ರತಿಪಾದಿಸಲು ಪ್ರಯತ್ನಿಸಿರುವುದು ಅಭಿನಂದನಾರ್ಹವಾದುದು. ಶಬರಶಂಕರನು ತನ್ನ ಕಿಂಕರನನ್ನು ಕಂಡು ಮೊದಲು ಮೊದಲು ಕಿಡಿಗಾರಿದರೂ ಆ ತರುವಾಯ ಆತನಿಗೆ ಅನುಗ್ರಹವಿತ್ತು ಆಶೀರ್ವದಿಸಿದ ಸನ್ನಿವೇಶ ಸ್ವಾರಸ್ಯ ವಾಗಿದೆ. ಇಂದ್ರನ ಪುತ್ರವಾತ್ಸಲ್ಯ ಅರ್ಜುನನನ್ನು ಉಗ್ರತಪಶ್ಚರ್ಯದಲ್ಲಿ ಸಲಹಿ ಸಂರಕ್ಷಿಸಿದರೆ, ಪರಮೇಶ್ವರನ ಶಕ್ತಿರಕ್ಷೆ ಆತನನ್ನು ಊರ್ವಶೀವ್ಯಾಮೋಹ ದಿಂದ ಪಾರುಮಾಡುತ್ತದೆ. ಮಾನವನು ಕಲಿಯಾಗಿದ್ದರೆ ಸಾಲದು ಅವನು ಶುಚಿಯೂ ಆಗಿರಬೇಕೆಂಬ ತತ್ತ್ವ ಇಲ್ಲಿ ಅಡಕವಾಗಿದೆ. ಈ ರೀತಿ ಎಲ್ಲಕಾಲಕ್ಕೂ ಮಾನವಶಕ್ತಿಯ ಹಿರಿಮೆಯನ್ನು ಸಾರಿಹೇಳುವ ಈ 'ಕಿರಾತಾರ್ಜನೀಯ' ಪ್ರಸಂಗವನ್ನು ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯನವರು ಕಾಲಧರ್ಮಕ್ಕೆ ಅನುಗುಣವಾಗಿ ತಮ್ಮ ಸಹಜವಾದ ನಿರರ್ಗಳವಾದ ಶೈಲಿಯಲ್ಲಿ ಮನವೊಲಿ ಯುವಂತೆ ರಚಿಸಿರುತ್ತಾರೆ. ವಿಷಯದ ಗಾಂಭೀರ್ಯಕ್ಕೆ ತಕ್ಕಂತೆ ಸರಳ ರಗಳೆಯ ಛಂದೋಗತಿ ಸಫಲವಾಗಿದೆ. ಪ್ರಕೃತಲೇಖಕರ ಈ ಸತ್ಕೃತಿ ಎಲ್ಲ ಸಹೃದಯರ ಆದರ ಅಭಿಮಾನಗಳಿಗೆ ಪಾತ್ರವಾಗಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಜಿ. ವರದರಾಜರಾವ್

# ಅರಿಕೆ

'ಪಾಶುಪತಾಸ್ತ್ರ' ಎಂಬ ಮೂರು ಅಂಕಗಳ ಈ ಕಾವ್ಯನಾಟಕವನ್ನು ಪೂಜ್ಯಶ್ರೀ ಡಾ॥ ಜಚನಿ ಅವರ ಪೀಠಾಧಿರೋಹಣ ಪರ್ವಾಚರಣ ಸಮಾರಂಭ ತಾ. ೨೪-೬-೧೯೭೩ ರಂದು ಬೆಂಗಳೂರು ನಗರದಲ್ಲಿ 'ನಿಡುಮಾಮಿಡಿನಿವಾಸ' ದಲ್ಲಿ ನಡೆದ ಸಂದರ್ಭದಲ್ಲಿ ಪ್ರಧಾನ ಅತಿಥಿಗಳಾಗಿ ದಯಮಾಡಿಸಿದ್ದ ವಿದ್ವಾಂಸ ವರ್ಯರೂ, ಕನ್ನಡ ವಾಙ್ಮಯಧುರೀಣರೂ, ವಿಶಾಲ ಹೃದಯರೂ, ಸದ್ಗುಣ ಸಂಪನ್ನರೂ, ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳೂ ಆದ ಸನ್ಮಾನ್ಯ ಪ್ರೊ॥ ದೇ. ಜವರೇಗೌಡರು, ಎಂ.ಎ., ಅವರು ದಯೆಯಿಟ್ಟು ಬಿಡುಗಡೆಮಾಡಿ ಪ್ರೋತ್ಸಾಹಿಸಿರುತ್ತಾರೆ.

ಈ ಮೊದಲು "ತಪಃಫಲ" ಎಂಬ ಕಾವ್ಯನಾಟಕವನ್ನು ಬರೆದು ಪ್ರಕಟಿಸಿ ದೆನು. ಆ ನಾಟಕವನ್ನು ಸಾವಧಾನದಿಂದ ಓದಿ ಶ್ರೀ ದೇಜಗೌ ಅವರು ತುಂಬ ವಿಶ್ವಾಸದಿಂದ ಮುನ್ನುಡಿಯನ್ನು ಬರೆದು ಶುಭಾಶಯವನ್ನು ಹಾರೈಸಿರುತ್ತಾರೆ. ಈಗ ಅದೇ ನಾಟಕ ವಸ್ತುವನ್ನು ವಿಸ್ತರಿಸಿ ಈ 'ಪಾಶುಪತಾಸ್ತ್ರ' ನಾಟಕ ವನ್ನು ಬರೆದಿರುತ್ತೇನೆ. ಇದರಲ್ಲಿ ಮೊದಲನೆಯ ಅಂಕದ ಮೊದಲನೆಯ ದೃಶ್ಯ ಮತ್ತು ಮೂರನೆಯ ಅಂಕ ಹೊಸದಾಗಿ ಸೇರಿವೆ. 'ತಪಃಫಲ' ನಾಟಕ ದಲ್ಲಿ ಅರ್ಜುನನು ಶಿವನಿಂದ ಪಾಶುಪತಾಸ್ತ್ರವನ್ನು ಪಡೆದ ಮೇಲೆ ಇಂದ್ರಕೀಲ ಪರ್ವತದಿಂದ ಪುನಃ ಪಾಂಡವರ ಆಶ್ರಮಕ್ಕೆ ಹೋದನೆಂಬುದು ವ್ಯಕ್ತವಾಗುವು ದಿಲ್ಲ. ಅವನು ಅಲ್ಲಿಂದ ದೇವೇಂದ್ರನ ಅಪ್ಪಣೆಯಂತೆ ಅಮರಾವತಿಗೆ ಹೋಗಿ ಅಲ್ಲಿ ಐದು ವರ್ಷ ಕಾಲವಿದ್ದು ಊರ್ವಶಿಯಿಂದ ಶಾಪಗ್ರಸ್ತನಾಗಿ, ಅನಂತರ ನಿವಾತಕವಚರೆಂಬ ರಾಕ್ಷಸರನ್ನು ಪಾಶುಪತಾಸ್ತ್ರ ಪ್ರಯೋಗದಿಂದ ಸಂಹರಿಸಿ, ದೇವಲೋಕದ ಮನ್ನಣೆಗೆ ಪಾತ್ರನಾದನು. ಆ ತರುವಾಯ ಅವನು ಅಮರಾ ವತಿಯಿಂದ ಹೊರಟು ವನವಾಸದಲ್ಲಿದ್ದ ಸಹೋದರರ ಪರ್ಣಶಾಲೆಯನ್ನು ಸೇರಿದನು. ಕಾಲಕ್ರಮದಲ್ಲಿ ಅರ್ಜುನನು ಪಾಶುಪತಾಸ್ತ್ರದಿಂದ ಮಹಾಭಾರತ ಯುದ್ಧದಲ್ಲಿ ಸೈಂಧವನನ್ನೂ ಕರ್ಣನನ್ನೂ ಸಂಹರಿಸುವನೆಂಬ ಅಂಶವನ್ನು ಈ ನಾಟಕದಲ್ಲಿ ಪ್ರಾಸಂಗಿಕವಾಗಿ ಸೂಚಿಸಲಾಗಿದೆ. ಆದ್ದರಿಂದ ಈ ನಾಟಕ ಅರ್ಜುನನ ತಪಃಫಲದ ಪೂರ್ಣಚಿತ್ರವನ್ನು ರೂಪಿಸುತ್ತದೆ. 'ತಪಃಫಲ'

ನಾಟಕದ ವಿಸ್ತಾರವೇ 'ಪಾಶುಪತಾಸ್ತ್ರ' ನಾಟಕವೆಂಬುದನ್ನು ಸಹೃದಯರಲ್ಲಿ ನಿವೇದಿಸುತ್ತೇನೆ.

ಈ 'ಪಾಶುಪತಾಸ್ತ್ರ' ನಾಟಕವನ್ನು ಬಿಡುಗಡೆ ಮಾಡಲು ಅವಕಾಶ ವನ್ನು ಕಲ್ಪಿಸಿಕೊಟ್ಟು ಆಶೀರ್ವದಿಸಿದ ಡಾ॥ ಜಚನಿ ಅವರಿಗೆ ಅನಂತ ಪ್ರಣಾಮಗಳನ್ನು ಅರ್ಪಿಸುತ್ತೇನೆ. ಈ ಪರಿಷ್ಕೃತ ನಾಟಕವನ್ನು ಮತ್ತೊಮ್ಮೆ ಕೃಪೆಯಿಟ್ಟು ಅವಲೋಕಿಸಿ ವಸ್ತುವಿನ್ಯಾಸವನ್ನು ಒಪ್ಪಿ ಪ್ರೋತ್ಸಾಹಿಸಿದ ಸನ್ಮಾನ್ಯ ಶ್ರೀ ದೇಜಗೌ ಅವರಿಗೆ ನನ್ನ ಸವಿನಯ ವಂದನೆಗಳು. ಈ ನಾಟಕ ವನ್ನು ಓದಿ ತಮ್ಮ ಅಭಿಪ್ರಾಯಗಳನ್ನು ಸೂಚಿಸಿ ಪ್ರೋತ್ಸಾಹಿಸಿದ ನನ್ನ ಇಬ್ಬರು ಮಾನ್ಯ ಮಿತ್ರರಾದ ಡಾ॥ ಪು.ತಿ. ನರಸಿಂಹಾಚಾರ್ಯರಿಗೂ ಡಾ॥ ಜಿ. ವರದ ರಾಜರಾಯರಿಗೂ ನನ್ನ ಪ್ರೀತಿಯ ನಮನಗಳನ್ನು ಸಲ್ಲಿಸುತ್ತೇವೆ.

ಈ ಗ್ರಂಥವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟು ಸಹ ಕರಿಸಿದ 'ಮಿತ್ರ ಪ್ರಿಂಟರ್ಸ್' ಇವರ ಸೌಹಾರ್ದ್ರತೆಯನ್ನು ಸ್ಮರಿಸುತ್ತೇನೆ.

ಮೈಸೂರು
ತಾ. ೨೪–೬–೧೯೭೩

ವಿದ್ಯಾವಿಭೂಷಣ
ಓ. ಎನ್. ಲಿಂಗಣ್ಣಯ್ಯ

## ಅಭಿಪ್ರಾಯ-ದರ್ಶನ

೧. "ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರು":- (ಮುನ್ನುಡಿಯಿಂದ)

"ಸಾಂಸ್ಕೃತಿಕ ಮತ್ತು ರಾಜಕೀಯ ರೀತಿ ನೀತಿಗಳ ಹಿನ್ನೆಲೆಯಲ್ಲಿ ಪುಣ್ಯಶ್ಲೋಕರಾದ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯುರವರ ಭವ್ಯ ಚರಿತ್ರೆಯನ್ನು ಶ್ರೀ ಓ. ಎನ್. ಲಿಂಗಣ್ಣಯ್ಯ ಬಿ.ಎ. (ಆನರ್ಸ್) ಅವರು ಈ ಚಿಕ್ಕ ಪುಸ್ತಕದಲ್ಲಿ ಸಂಕ್ಷೇಪವಾಗಿ ಚತುರತೆಯಿಂದ ಚಿತ್ರಿಸಿದ್ದಾರೆ"

ಬಸವನಗುಡಿ-ಬೆಂಗಳೂರು

೧೬-೧-೧೯೪೦ ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯ

೨. "ಜಂಗಮವಿಜಯನಾಟಕ" :- (ಮುನ್ನುಡಿಯಿಂದ)

"ಈ ನಾಟಕ ಕರ್ತರಾದ ಶ್ರೀ ಓ. ಎನ್. ಲಿಂಗಣ್ಣಯನವರು ಕನ್ನಡ ನಾಡನ್ನು ತಮ್ಮ ಸಾಹಿತ್ಯ ಕೃತಿಗಳಿಂದ ಬೆಳಗಿಸುತ್ತ ಬಂದಿದ್ದಾರೆ. ಅವರ ಜೀವನ ಚರಿತ್ರೆಗಳು ನಾಟಕಗಳು ಈಗಾಗಲೇ ಹಲವು ವಿಧದಲ್ಲಿ ಪ್ರಸಾರ ಗೊಂಡು ಕನ್ನಡಿಗರ ಸಾಹಿತ್ಯ ಪಿಪಾಸೆಯನ್ನು ತಣಿಸಿವೆ"

'ಅನ್ನಪೂರ್ಣ'

ವಿಶ್ವೇಶ್ವರಪುರಂ-ಬೆಂಗಳೂರು (ಅನಂತರ) ಡಾ|| ಅ. ನ. ಕೃಷ್ಣರಾಯ

೨೨-೨-೧೯೪೪

೩. "ಜೈನಧರ್ಮ ಪರಿಚಯ" :- (ಶುಭಾಶಯದಿಂದ)

"ಶ್ರೀ ಓ. ಎನ್ ಲಿಂಗಣ್ಣಯ್ಯನವರು ಒಂದು ದೊಡ್ಡ ಅಧಿಕಾರದಲ್ಲಿದ್ದರೂ ಇವರ ಮಾತುಗಳಲ್ಲಿ ಎಷ್ಟೊಂದು ವಿನಯ! ಅಧಿಕಾರ ಮದ ಪ್ರಾಯಃ ಇವರನ್ನು ಕಂಡೇ ಇಲ್ಲ. ಉತ್ತರದಾಯಿತ್ವಪೂರ್ಣ ಹಾಗೂ ಬಿಡುವಿಲ್ಲದ ಅಧಿಕಾರದಲ್ಲಿದ್ದು ಸಾಹಿತ್ಯ ಸೇವೆಗೆ ಅವಕಾಶವನ್ನು ಕಲ್ಪಿಸಿಕೊಳ್ಳುವುದೆಂದರೆ ಸುಲಭವಾದ ಕೆಲಸವಲ್ಲ. ಇದರಿಂದಲೇ ವಾಚಕರು ಶ್ರೀ ಲಿಂಗಣ್ಣಯ್ಯನವರ ಅದಮ್ಯ ಸಾಹಿತ್ಯ ಪ್ರೇಮವನ್ನು ಸಹಜವಾಗಿ ಊಹಿಸಬಹುದು"

ವಿದ್ಯಾಭೂಷಣ

ಮೂಡುಬಿದರೆ ಕೆ. ಭುಜಬಲಿಶಾಸ್ತ್ರಿ

೨೬-೧೦-೧೯೬೩ ಸಂಪಾದಕ-"ಗುರುದೇವ"

೧. ಆತ್ಮಜ್ಞಾನಿ ಅಲ್ಲಮಪ್ರಭು :– (ಮುನ್ನುಡಿಯಿಂದ)

“ಶ್ರೀಮಾನ್ ಓ. ಎನ್. ಲಿಂಗಣ್ಣಯ್ಯನವರು ಕನ್ನಡಿಗರಿಗೆ ಚಿರಪರಿಚಿತರು. ಕನ್ನಡ ಸಾಹಿತ್ಯಕ್ಕೆ ಮಿಗಿಲಾದ ಸೇವೆಯನ್ನು ಸಲ್ಲಿಸಿದ್ದಾರೆ. ಈವರೆಗೆ ವಿವಿಧ ವಿಷಯಕವಾದ ಹಲವಾರು ಉತ್ತಮ ಗ್ರಂಥಗಳನ್ನು ಬರೆದು ಕವಿತೆಗಳನ್ನು ರಚಿಸಿ ಜನತೆಯ ಮುಂದಿಟ್ಟಿದ್ದಾರೆ. ಇವರ ಕೆಲವು ಗ್ರಂಥಗಳು ಮೈಸೂರು ಸೀಮೆಯ ಮಾಧ್ಯಮಿಕ ಮತ್ತು ಪ್ರೌಢ ಶಾಲೆಗಳಿಗೆ ಪಠ್ಯಪುಸ್ತಕಗಳಾಗಿ ನಿಯಮಿಸಲ್ಪಟ್ಟು ಮನ್ನಣೆಯನ್ನು ಪಡೆದಿವೆ. ಇವರು ಒಳ್ಳೆಯ ಜಿಜ್ಞಾಸುಗಳು ; ಸಾಹಿತ್ಯ ಪ್ರೇಮಿಗಳು ; ಕನ್ನಡ ನುಡಿಯ ನಚ್ಚಿನ ಭಕ್ತರು ; ಒಳ್ಳೆಯ ವಾಗ್ಮಿಗಳೂ ಅಹುದು.”

ಸಿದ್ಧಗಂಗಾ (ಈಗ) ಡಾ|| ಶ್ರೀ|| ಶಿವಕುಮಾರಸ್ವಾಮಿಗಳು
೧೫ ಜನವರಿ ೧೯೪೫

೨. ವೈರಾಗ್ಯನಿಧಿ ಅಕ್ಕಮಹಾದೇವಿ :– (ಮುನ್ನುಡಿಯಿಂದ)

“ಆಮೂಲಾಗ್ರವೂ ಅಚ್ಚಗನ್ನಡ ಶೈಲಿ. ಮನ ಮೆಚ್ಚುವ ಪದ ಪ್ರಯೋಗ, ಭಾವ ಒಪ್ಪುವ ತತ್ತ್ವಾನು ವಿವರಣೆ ಓದುಗರ ಒಲುಮೆಯನ್ನು ಹಿಗ್ಗಿಸುವ ಉದಾತ್ತವೂ ಉಜ್ವಲವೂ ಆದ ಅಕ್ಕನ ವಿರತಿ ಜೀವನವರ್ಣನೆ ಹಾಲು ಕೆನೆಯಂತೆ ಮಧುರವಾಗಿದೆ ; ತೆಂಗಿನ ಎಳನೀರಿನಂತೆ ತಂಪಾಗಿದೆ.”

ಬೆಂಗಳೂರು
೧೫-೨-೧೯೪೭ (ಈಗ) ಡಾ|| ಶ್ರೀ|| ಜಚನಿ

## ಪಾತ್ರ ಪರಿಚಯ

| | |
|---|---|
| ಪುಷ್ಪರಥ, ಚಿತ್ರಚೂಡ | —ಗಂಧರ್ವಮಿತ್ರರು |
| ದ್ವಾಪರಯುಗಪುರುಷ | —ಋಷಿ |
| ಗಣಪತಿ, ನಂದೀಶ, ಭೃಂಗೀಶ | —ಪ್ರಮಥರು |
| ಕಿರಾತ ನಾಯಕ | —ಈಶ್ವರ |
| ಕಿರಾತ ನಾಯಕಿ | —ಪಾರ್ವತೀ |
| ತರುಣಮುನಿ | —ಅರ್ಜುನ |
| ಜಂಗಮ | —ಇಂದ್ರ |
| ಧೌಮ್ಯ | —ಪಾಂಡವರ ಪುರೋಹಿತ |
| ಸೌಮ್ಯ | —ಧೌಮ್ಯನ ಶಿಷ್ಯ |
| ವನವೇಣಿ | —ಸೌಮ್ಯನ ಪ್ರೇಯಸಿ |

ಅಗಸ್ತ್ಯ, ಜಮದಗ್ನಿ, ದಧೀಚಿ, ಸಾನಂದ, ಕಶ್ಯಪ, ಗೌತಮ, ದೂರ್ವಾಸ ಧರ್ಮರಾಯ, ಭೀಮ, ನಕುಲ, ಸಹದೇವ, ದ್ರೌಪದಿ, ವೇದವ್ಯಾಸ, ಮಾತಲಿ, ದೇವೇಂದ್ರ, ಶಚಿ, ಅಪ್ಸರೆಯರು, ಸಖಿಯರು, ಬೃಹಸ್ಪತಿ, ಶುಕ್ರಾಚಾರ್ಯ, ರಾಕ್ಷಸೇಂದ್ರ, ಮಂತ್ರಿ, ಸೇನಾಪತಿ.

# ಪಾಶುಪತಾಸ್ತ್ರ

## ಪ್ರಥಮಾಂಕ

### ದೃಶ್ಯ ೧

[ಹಿಮಗಿರಿಯ ಮಾನಸಸರೋವರದಲ್ಲಿ ದ್ವಾಪರಯುಗಪುರುಷ ಮಿಂದು ಮಡಿಯುಟ್ಟು ಮಂಜುಲಿಂಗವನ್ನು ಪೂಜಿಸಿ ಧ್ಯಾನಾಸಕ್ತನಾಗಿದ್ದಾನೆ. ಸೂರ್ಯೋದಯ ಸಮಯ]

(ತೆರೆಯ ಮುಂದೆ)

ಪುಷ್ಪರಥ, ಚಿತ್ರಚೂಡ—(ಇಬ್ಬರೂ ಪ್ರವೇಶಿಸಿ ಆಲಿಸುತ್ತ ನಿಲ್ಲುವರು)

(ತೆರೆಯ ಹಿಂದೆ)

ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೆ
ಅಮೃತೇಶಾಯ ಶರ್ವಾಯ ಮಹಾದೇವಾಯತೇ ನಮಃ ||

(ಎಂಬ ಸ್ತೋತ್ರ ಕೇಳುತ್ತದೆ)

ಪುಷ್ಪರಥ—ಇತ್ತಬಾ ಚಿತ್ರಚೂಡ

(ದೃಷ್ಟಿಸಿ ನೋಡುತ್ತಾ)

ಚಿತ್ರಚೂಡ— ಅಲ್ಲೇನು ಪುಷ್ಪರಥ !

ಪುಷ್ಪರಥ—ನೋಡಲ್ಲಿ ಮಾನಸಸರೋವರದ ಬಳಿಯಲ್ಲಿ
ಮುಂಜಾನೆ ಚಳಿಯಲ್ಲಿ ಋಷಿಯೊರ್ವ ಕುಳಿತಿಹನು
ಪರಬ್ರಹ್ಮಯೋಗದಲಿ

**ಚಿತ್ರಚೂಡ—** ಅಹುದು! ಕಂಡಾಯ್ತು!
ಯಾರವನು ನೋಡೋಣ ನಡೆಮುಂದೆ

(ನಿಷ್ಕ್ರಮಣ) (ತೆರೆ ಏಳುವುದು)

**ದ್ವಾಪರಯುಗಪುರುಷ**—(ಮಂಜುಲಿಂಗದ ಮುಂಭಾಗದಲ್ಲಿ)
ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೆ
ಅಮೃತೇಶಾಯ ಮಹಾದೇವಾಯ ತೇ ನಮಃ

(ಎಂದು ಪ್ರಣಾಮ ಮಾಡಿ ನಿಲ್ಲುವನು)

**ಪುಷ್ಪರಥ ಚಿತ್ರಚೂಡ**—(ಇಬ್ಬರೂ ಪ್ರವೇಶಿಸಿ)
ನಮಸ್ತುಭ್ಯಂ ಮಹೋದಯ!

**ಯುಗಪುರುಷ**—ಶುಭಮಸ್ತು ಮಹೋದಯರೆ!

**ಚಿತ್ರಚೂಡ**—ಎಲ್ಲಿಂದ ಬಂದಿಹಿರಿ ನೀವಾರು? ನಾವೆಂದು
ಕಂಡಿಲ್ಲ ನಿಮ್ಮ ನೀಯೆಡೆಯಲ್ಲಿ ನಾವಿತ್ತ
ಸಂಚಾರ ಕಾಲದಲಿ ಬಂದೆಂದು ಆಗಾಗ

**ಯುಗಪುರುಷ**—ದ್ವಾಪರಯುಗ ಪುರುಷಂ ನಾನು
ನೀವಾರು ಎತ್ತಣಿಂ ಬಂದಿಹಿರಿ ಮಿತ್ರರೇ!

**ಚಿತ್ರಚೂಡ**—ಗಂಧರ್ವ ವಂಶಜರು ನಾವು ಭೂಮಿಯಲಿ
ಮಹೇಂದ್ರಕೀಲದಲಿ ತಪಸ್ಗೈವ ಋಷಿವರರ
ಆಶ್ರಮಗಳತ್ತ ಹೊರಟಿಹೆವು ನಾವಿಂದು
ಕೈಲಾಸ ದತ್ತಣಿಂ ಬಂದಿಹೆವು

**ಯುಗಪುರುಷ—** ಶುಭಮಸ್ತು
ದೇವಕಾರ್ಯವೇನಿಹುದು ತಪೋವನದಲ್ಲಿ

ಪುಷ್ಪರಥ—ಋಷಿವರರು ಸೇರುವರು ಬ್ರಹ್ಮಧರ್ಮ ಸಭೆಯಲ್ಲಿ
ಗಣಪತಿಯ ಅಗ್ರಪೂಜೆಯಲಿ ನಾಳೆ ಅದರಿಂದ
ತೆರಳುವೆವು ಪೂರ್ವಸಿದ್ಧತೆಯ ನೀಕ್ಷಿಸಲೆಂದು
ಗಣನಾಥನಾಣತಿಯ ರೀತಿಯಲಿ ಯುಗದೇವ!

ಯುಗಪುರುಷ—ನಿಮ್ಮ ಹೆಸರೇನೋ ತಿಳಿಸಲಿಲ್ಲ!

ಪುಷ್ಪರಥ—ಇವನೆನ್ನ ಜೀವಮಿತ್ರ ಚಿತ್ರಚೂಡ!

ಚಿತ್ರಚೂಡ—ಇವನೆನ್ನ ಆಪ್ತಮಿತ್ರ ಪುಷ್ಪರಥ!

ಯುಗಪುರುಷ—ಸವಾರ್ಥ ಸಿದ್ಧಿಸಲಿ ಸದ್ಧರ್ಮ ಕಾರ್ಯದಲಿ

ಚಿತ್ರಚೂಡ—ಯುಗಧರ್ಮವೆಂತಿಹುದು ಭೂಲೋಕದಲಿ ದೇವಾ?

ಯುಗಪುರುಷ—ಭೂಭಾರ ಹೆಚ್ಚಾಯ್ತು ತತ್ತರಿಸಿ ನಿಂತಾಯ್ತು
ನಾನಿಂದು ಧರ್ಮಕಂಟಕರ ಹಿಂಸೆಯಲಿ ಆ
ದುಷ್ಟ ಕೌರವ ಜಯಸಿದನು ಕಪಟ ದ್ಯೂತದಲಿ
ನಿರ್ದೋಷಿ ಧರ್ಮ ತನಯನ ಸಕಲ ಸಾಮ್ರಾಜ್ಯ
ಭಾಗ್ಯವನು ತೊಳಲುವರು ಪಾಂಡವರು ಕಷ್ಟದಲಿ
ಹನ್ನೆರಡು ವರ್ಷ ವನವಾಸ ಮತ್ತೊಂದು ವರ್ಷ
ಅಜ್ಞಾತವಾಸ ನಿಯಮದಲಿ ಹಗಲಿರಳು

ಪುಷ್ಪರಥ—ಇಲ್ಲೇಕೆ ಬಂದಾಯ್ತು ನೀನಿಂದು ಯುಗಪುರುಷ

ಯುಗಪುರುಷ—ನಾನಿಲ್ಲಿ ಬದರಿಕಾಶ್ರಮದಲ್ಲಿ ಕಳೆದಿರಳು
ಬಾದರಾಯಣ ಮಹರ್ಷಿಯ ದರ್ಶನಂಗೈದು
ಅರುಹಿದೆನು ಧರ್ಮ ಕಾಡು ಪಾಲಾಯ್ತೆಂಬುದನು
ಬೇಡಿದೆನು ಅಭಯವನು ಧರ್ಮರಕ್ಷಣೆಯಲಿ
ಆ ಚಂದ್ರವಂಶಜರ ಪಿತಾಮಹನೆಡೆಯಲ್ಲಿ

ಗಂಧರ್ವರು—ಧರ್ಮಾಭಿವೃದ್ಧಿರಸ್ತು ಮಹಾಶಯ !

ಯುಗಪುರುಷ—ನಾನ್ನಿನ್ನು ತೆರಳುವೆನು ಸತ್ಯಲೋಕ ವೈಕುಂಠ ಮೇಣ್
ಕೈಲಾಸಧಾಮಗಳ ಮಾರ್ಗದಲಿ ಪರಮೇಷ್ಠಿ
ನಾರಾಯಣ ಶಂಕರರ ದರ್ಶನಾರ್ಥದಲಿ

ಗಂಧರ್ವರು—ತಥಾಸ್ತು

(ನಿಷ್ಕ್ರಮಣ) (ತೆರೆ ಬೀಳುವುದು)

## ದೃಶ್ಯ ೨

[ಹಿಮಗಿರಿಯ ಸಾನುಪ್ರದೇಶ. ಅಲ್ಲಲ್ಲಿ ಋಷ್ಯಾಶ್ರಮಗಳು ಕಾಣುತ್ತಿವೆ. ಕಾಂತಾರದ ಪ್ರಕೃತಿಸೌಂದರ್ಯ ಮನೋಹರವಾಗಿದೆ. ತಿಳಿನೀರಿನ ಸರೋವರಗಳಲ್ಲಿ ಹಂಸಗಳು ಕಾಣುತ್ತಿವೆ; ಕಮಲಗಳು ಅರಳಿವೆ. ಆಶ್ರಮಗಳ ಹತ್ತಿರ ಗೋವೃಂದ, ಹರಿಣಚಯ; ಪುಷ್ಪವಾಟಿಕೆಗಳಿವೆ, ಋಷಿಪತ್ನಿಯರೂ ಋಷಿಪುತ್ರಿಯರೂ ಆಶ್ರಮಪ್ರದೇಶದಲ್ಲಿ ಹೂಪತ್ರೆಗಳನ್ನು ಬಿಡಿಸುತ್ತಿದ್ದಾರೆ; ಸಮಿತ್ತುಗಳನ್ನು ತರುತ್ತಿದ್ದಾರೆ. ವಟುವೃಂದ ವೇದಾಧ್ಯಯನ ಮಾಡುತ್ತಿದ್ದಾರೆ ಹೋಮಧೂಮದ ಪರಿಮಳ ತುಂಬಿದೆ].

(ತೆರೆಯ ಮುಂದೆ)

ನಂದೀಶ—(ಪ್ರವೇಶಿಸಿ)

ಮುಂದೆ ನೋಡಿ—

"ಅಗಜಾನನ ಪದ್ಮಾರ್ಕಂ ಗಜಾನನಮಹರ್ನಿಶಂ
ಅನೇಕದಂತಂ ಭಕ್ತಾನಾಮೇಕದಂತಮುಪಾಸ್ಮಹೇ"

[ಸ್ವಗತ]

ವಿಜಯಶ್ರೀವಿನಾಯಕದರ್ಶನಂ ಶುಭಮಲ್ತೆ !
ಬ್ರಾಹ್ಮೀಮುಹೂರ್ತದಲಿ ಕೈಲಾಸಪ್ರಾಂತದಲಿ !

(ಎಂದು ಕೈಮುಗಿದು)

ವಂದಿಪೆಂ ಗಣನಾಥನಂ ಸಕಲದೇವಗಣ
ಸಂಪೂಜ್ಯನಂ ಪಾರ್ವತೀವರಪುತ್ರನಂ ಶುಭ
ಗಾತ್ರನಂ ಸರ್ವಸಿದ್ಧಿ ಪ್ರದಾಯಕನಂ ಶಿವ
ಹೃದಯಾಬ್ಧಿಚಂದ್ರನಂ ಆನಂದರೂಪನಂ

**ಗಣಪತಿ**—(ಪ್ರವೇಶಿಸುತ್ತ)

ವಂದಿಪೆಂ ಪ್ರಮಥಪುಂಗವನಂ ಮಹಾನಂದ
ಮೂರ್ತಿಯಂ ಶ್ರೀಶಂಭುಕೃಪಾಪಾತ್ರನಂ
ತತ್ತ್ವವಾರಿಧಿ ಪೂರ್ಣಚಂದ್ರನಂ ಲೋಕತ್ರಯ
ವಂದ್ಯನಂ ಕೈಲಾಸಧಾಮನಂ ನಂದಿಯಂ !

(ಇಬ್ಬರೂ ಸಂಧಿಸಿ)

**ನಂದೀಶ**—ಎಲ್ಲಿಂದಲೈತಂದೆ ಗಣನಾಥ ನೀನಿಂದು !

**ಗಣಪತಿ**—ಹಿಮಗಿರಿಯ ತಪ್ಪಲಿನ ಋಷಿಗಳಾಶ್ರಮದಲ್ಲಿ
ಪೂಜೆಯಂ ಕೈಗೊಂಡು ಬರುತಿಹೆನು ನಾನಿಂದು !

**ನಂದೀಶ**—ಅಲ್ಲೇನು ನಡೆದಿತ್ತು ನಿನ್ನನಾಹ್ವಾನಿಸಲು

**ಗಣಪತಿ**—ಋಷಿವೃಂದ ನೊಂದಿಹುದು ಅಲ್ಲೊಬ್ಬ ನವ್ಯಯತಿ
ತಪಸ್ಯೆಯೆ ಶಂಕರನ ಪೂಜೆಯಲಿ ದಿನದಿನವು
ಆಯತಿಯ ತಪಃಪ್ರಭೆಯು ಬೇಗೆಯಲಿ ಸಮಸ್ತ
ಮುನಿವರರು ಶಿವಸನ್ನಿಧಿಯ ಬಯಸಿ ಬರುವರು
ಬೇಗ ಮೊರೆಯಿಡಲು ಕೈಲಾಸಗಿರಿ ಮಾರ್ಗದಲಿ

ಅದರಿಂದ ಪೂಜೆನಡಸಿದರಲ್ಲಿ ಭಕ್ತಿಯಲಿ
ಅಗ್ರಪೂಜಾಪಟ್ಟದಲಿ ನಾನಿದ್ದು ಹರಸಿದೆನು !

ನಂದೀಶ—ಧರ್ಮಬೆಳೆಯಲಿ ಧರೆಯ ಜನದಲ್ಲಿ ಸಂತತಂ !

ಗಣಪತಿ—ನೀನೇಕೆ ಧರೆಗಿಳಿದು ಬಂದಿದ್ದೆ ನಂದೀಶ ?

ನಂದೀಶ—ಧರ್ಮವನು ರಕ್ಷಿಸಲು ಶಬರ ಶಂಕರ ಲೀಲೆ
ಯಂ ಮೆರೆಯೆ ಗಿರಿಜೇಶ ಧರೆಗಿಳಿಯೆ ಬಯಸಿಹನು !
ಭೂಮಿಯಲಿ ಕಾಲ ಧರ್ಮವನರಿತು ಬಂದಾಯ್ತು
ಪರಶಿವನ ಬೆಸನಾಂತು ಶೀಘ್ರದಲಿ ನಾನಿಂದು !

ಗಣಪತಿ—ಪರಮಾತ್ಮನವತಾರವೆಂದೊಡೇಂ ಕೈಲಾಸ
ಧರೆಗಿಳಿದು ಬಂದಂತೆ ನಂದೀಶ !

ನಂದೀಶ— ನಿಶ್ಚಯಂ
ನಿಶ್ಚಯಂ ! ಗಣನಾಥ ಎಳ್ಳನಿತು ಸಟಿಯಲ್ಲ !

ಗಣಪತಿ—"ಲೋಕಾಸ್ಸಮಸ್ತಾಸ್ಸುಖಿನೋಭವಂತು"
ನಾವಿನ್ನು ತೆರಳೋಣ ನಂದೀಶ ! ಜೊತೆಗೂಡಿ
ಕೈಲಾಸ ಪಥದಲ್ಲಿ ! ಶಿವಯೋಗ ಶಕ್ತಿಯಲಿ !

ನಂದೀಶ—ತಥಾಸ್ತು ಗಣನಾಥ ! ತೆರಳೋಣ ನಾವಿನ್ನು !

(ನಿಷ್ಕ್ರಮಣ) (ತೆರೆ ಏಳುವುದು)

## ದೃಶ್ಯ ೩

(ಋಷ್ಯಾಶ್ರಮ)

ಅಗಸ್ತ್ಯ—(ಪ್ರವೇಶಿಸಿ ಋಷಿಗಣದೊಂದಿಗೆ)

ಓಂಕಾರವೊಳಗುತಿದೆ ದೂರದಲಿ ಕೈಲಾಸ
ಧಾಮದಲಿ, ಆಲಿಸಿರಿ, ಓಂಕಾರನಾದವನು !

ಜಮದಗ್ನಿ—ಕೇಳಿದೆವು ಋಷಿದೇವ ! ಭಕ್ತಿಯಿಂನಾವೆಲ್ಲ.

ಅಗಸ್ತ್ಯ—ಶ್ರೀಕಂಠ ಮಹಲಿಂಗ ಧವಳಾಂಗ ಈಶಾನ
ಗೌರೀಶ ಶಂಕರನ ಪೂಜೆಯಲಿ ನಲಿಯುತಿದೆ
ದೇವಗಣ ಕೈಲಾಸ ಧಾಮದಲಿ ಆನಂದ
ಭಾವದಲಿ. ಬ್ರಾಹ್ಮೀ ಸುಮುಹೂರ್ತದಲಿ ಕೃಷ್ಣ
ಪಕ್ಷದ ಏಕಾದಶಿಯ ಮಹಾಪೂಜೆಯಲಿ !

ದಧೀಚಿ—ಶುಭಯೋಗ ! ಶುಭಲಗ್ನ ! ಧಾವಿಸಿರಿ ಋಷಿವರರೆ !
ಆ ಪರಶಿವನ ದರ್ಶನಂಗೈದು ನಾವೆಲ್ಲ
ಧನ್ಯರಾಗುವ ಬನ್ನಿ

ಸಾನಂದ—ತಥಾಸ್ತು ! ತಥಾಸ್ತು ! 'ಓಂ ನಮಃ ಶಿವಾಯ !'

ಕಶ್ಯಪ—ಅಗಸ್ತ್ಯ ದಧೀಚಿ ಹರಕಂಠ ಶುಕ ಮೃಕಂಡ
ಕಣ್ವ ಗೌತಮ ಭೃಗು ವಶಿಷ್ಠ ಮಾರ್ಕಂಡೇಯ
ವಿಶ್ವಾಮಿತ್ರ ವ್ಯಾಸ ದೂರ್ವಾಸ ದೇವಾತ್ರಿ
ಸಾನಂದ ತೃಣಬಿಂದು ಉಪಮನ್ಯು ಪರಾಶರ
ಭರದ್ವಾಜ ಮಹೋದಯ ಮುನಿವರರೆ ಬನ್ನಿರೌ
ಶೀಘ್ರದಿಂ ಪದವಿಟ್ಟು ಸನ್ಮುಕ್ತಿಮಾರ್ಗದಲಿ !

ದಧೀಚಿ—ಬೇಗ ಬನ್ನಿರಿ !ಬಿತ್ತರದ ಹಿಮಗಿರಿಯ ದಾರಿ
ಸುತ್ತು ಬಳಸಿದೆ ವಾಸುಕಿಯೆ ಗಿರಿಯನಪ್ಪಿದಂತೆ !

ಗೌತಮ—ಕಾಣುತಿವೆ ಮಂಜು ತುಂಬಿರ್ಪ ಬಂಡೆಗಳೆಲ್ಲ
ಅಲ್ಲಲ್ಲಿ ತಪಗೈವ ಋಷಿವೃಂದ ನಿಂತಂತೆ
ಭಾವರುದ್ರರಮಣೀಯ ರಜತಾದ್ರಿ ಶಿಖರಾಗ್ರ

ಜಾಲದಿಂ ಧುಮುಕುತಿವೆ ನಿರ್ಝರಿಗಳಲ್ಲಲ್ಲಿ
ಕೇಳುವೊಡೆ ರುದ್ರ ವೀಣೆಯ ಧ್ವನಿಯು
ನುಡಿವಂತೆ ಅಚ್ಚ ಹಸುರಿನೀ ಕಾನನದಲ್ಲಿ

ಅಗಸ್ತ್ಯ—ಏರಿ ಬನ್ನಿರಿ ! ಮುಂದೆ ಬನ್ನಿರಿ ! ತಪೋಧನರೆ !
ದಾರಿಸಾಗಲಿ ಗಿರಿಯಮೇಲೇರಿ ಬನ್ನಿರೈ !
ಪಂಚಾಕ್ಷರೀ ಮಂತ್ರವನು ನುಡಿಯುತಿದೆ, ಕೇಳಿ
ಪ್ರಮಥಗಣ ಕೈಲಾಸದಲಿ ಶಿವನ ಪೂಜೆಯಲಿ !
ಹಿಂದೆ ನಿಲ್ಲದಿರಿ ಪುರುಷಾರ್ಥಸಾಧನೆಯಲ್ಲಿ
ಮೇಣ್‌ಲೋಕ ಹಿತಚಿಂತನೆಯ ಕರ್ಮಯೋಗದಲಿ !

ಜಮದಗ್ನಿ—ಬಹುದೂರ ಬಂದಿಹೆವು ಬಹುದೂರ ಬಂದಾಯ್ತು!
ಹಿಮಗಿರಿಯ ಋಷ್ಯಾಶ್ರಮಗಳಿಂದ
ನಾನಾ ಮೃಗಜಾಲ ಖಗವೃಂದ ಭರಿತ ಸಾಂದ್ರ
ವನವೆಲ್ಲ ಹಿಂದಾಯ್ತು ! ಮುನಿಪೋತ್ತಮರ ಪಾವನ
ಹೋಮ ಧೂಮಗಳಿಲ್ಲ ! ಫಲಿತ ತರುರಾಜಿಯಿಲ್ಲ !
ಹೂ ಬಿಟ್ಟು ಬಳುಕುತಿಹ ಲತೆಗಳಿಲ್ಲ !ತುಂಬಿರುವ
ನಿರ್ಮಲ ಜಲಕಾಸಾರಗಳಿಲ್ಲ ! ಹರಿಣಗಣ
ಗೋವೃಂದ ವಟುಜಾಲ ಸುಳಿದಂತೆ ಆ ನಮ್ಮ
ತಪೋವನ ಗ್ರಾಮ ಮೂಡುತಿದೆ ಎನ್ನಂತರಂಗ
ಪಟಲದಲಿ ನೆನೆದಷ್ಟು ನಮ್ಮೂರ ಚೆಲುವನ್ನು !

ಸಾನಂದ—"ಜನನೀಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸೀ"
ಎಂದೆಂಬ ಋಷಿವಾಣಿ ಸಟೆಯಲ್ಲ ಜಮದಗ್ನಿ !

ಕಶ್ಯಪ—ತವರ್ನಾಡ ನೆನಪಿನಲಿ ಸವಿಯುಂಟು ಹಿತವುಂಟು
ಪಡೆದ ಜನನಿಯ ಮಡಿಲ ಬಾಳಿನಲಿ ಸುಖವುಂಟು
ಹಿತವುಂಟು ! ಕೈಲಾಸ ವೈಕುಂಠದಿಂದೇನು ?
ತವರೂರು ನಮಗಿರಲಿ ; ತಾಯ್ನಾಡು ಸೊಗವಿರಲಿ !

ಅಗಸ್ತ್ಯ—ಜಮದಗ್ನಿ ಕಶ್ಯಪರೆ ಮೆಚ್ಚಿದೆನು ಮೆಚ್ಚಿದೆನು
ನಮ್ಮದಾ ತಪೋವನ ನಮಗಿರಲಿ ಎಂದೆಂದು
ಒದಗಿರ್ಪ ಶತ್ರುದುರಾಕ್ರಮಣವನು ಪರಿಹರಿಸ
ಬೇಕೆಂಬ ಸಂಕಲ್ಪ ಸಿದ್ಧಿಸಲಿ ಮರೆಯದಿರಿ.
ಆ ನಮ್ಮ ತಪೋರಾಜ್ಯ ಸುರಾಜ್ಯವಾಗಿರಲಿ
ಯೆಂದೆಂಬ ಧೀರಭಾವದ ಹಿಂದಾಗದಿರಿ
ದಾರಿಸಾಗಲಿ ಮುಂದೆ ; ಶಿವಪೂಜೆ ಮುಗಿದೀತು

ದಧೀಚಿ—ಮುನಿವರರೆ ! ಬನ್ನಿ, ನೋಡಿರಿ ಕಾಂಬುವುದು ಗಿರಿ
ಶಿಖರ ಕಾಂಚನ ಗಂಗಾ ! ಅದರಾಚೆ ಕಾಂಬುವುದೆ
ಧವಳಗಿರಿ ! ಹಿಮರಾಶಿ ತುಂಬಿರ್ಪ ರಜತಗಿರಿ
ಶ್ರೇಣಿಯಲಿ ನಲಿಯುತಿಹ ವಿದ್ಯಾಧರ ಗಂಧರ್ವ
ಕಿಂಪುರುಷ ದೇವಋಷಿಗಣವನೀಕ್ಷಿಸಿರಲ್ಲಿ !
ಅಲ್ಲಿ ನೋಡಿರಿ ಮೂಡಲಲಿ ದೂರದಲಿ ದೇವ
ಮಾನಿನೀವೃಂದ ಜಲಕೇಳಿಯಾಡುತಿದೆ ; ಹೂ
ಬಳ್ಳಿ ಸಾಲುಗಳು ಹೂಬಿಟ್ಟು ನಗುತಿಹವು ಸುರ
ಕನ್ನಿಕಾ ವಿಲಾಸಾನಂದ ಲೀಲೆಯಲಿ ಮೈ
ಮರೆತು ತಲೆದೂಗುತಿವೆ ತಂಗಾಳಿ ಸುಳಿಯುತಿರೆ
ಎಲ್ಲೆಲ್ಲು ಸುರಧೇನುಗಣ ಕಲ್ಪತರುವೃಂದ
ದೇವ ಖಗಮೃಗಜಲ ಕಾಣುತಿದೆ ಋಷಿವರರೆ !

ಅಗಸ್ತ್ಯ—ಮುಂದೆ ನಡೆಯಿರಿ ಬನ್ನಿ ! ಅಲ್ಲಿ ನೋಡಿರಿ ದಿವಿಜ
ಗಂಗಾದೇವಿ ಧಾವಿಪಳು ಗಂಭೀರ ಗಮನದಲಿ
ಶಂಕರನ ಜಟಾಮುಕುಟದಿಂ ಧುಮಿಕ್ಕಿ ಧರೆಯ
ಪಾವನಗೊಳಿಸೆ ಬರತಿಹಳು ಪುಣ್ಯರೂಪಿಣಿಯು !

ಜಮದಗ್ನಿ—ನಮಃ ಶ್ರೀದೇವಿ ಗಂಗಾಂಬಿಕಾ ನಮಸ್ತೇ !
ನಮಸ್ತುಭ್ಯಂ ಶ್ರೀ ಗಂಗಾಮಾತೆ—ಮಮ ಜನನಿ ;

ಲೋಕಪಾವನೆ ವರದೆ ಕಾವೇರಿ ಪಿನಾಕಿನಿ
ಹೇಮಾವತಿ ತುಂಗಭದ್ರೆ ಕುಮುದ್ವತಿ ಭೀಮರಥಿ
ವೇದಾವತೀ ರೂಪಿಣಿಯೆ ನಮೋನಮಃ !

ಸಾನಂದ—"ಗಂಗಾಚ ಯಮುನಾಚೈವ ಗೋದಾವರೀ ಸರಸ್ವತೀ
ನರ್ಮದಾ ಸಿಂಧು ಕಾವೇರೀ ಜಲೇಽಸ್ಮಿನ್ ಸನ್ನಿಧಿಂಕುರು."

ಅಗಸ್ತ್ಯ—ಇತ್ತ ನೋಡಿರಿ ಕಿತ್ತಡಿಗಳೇ ! ಧರಾಂಗನಾ
ಧಾಮವನು ! ಮೇಲೇರಿ ಬಂದಾಯ್ತು ತವಕದಲಿ.
ಇಂದಿಂಗೆ ವಾರವೆರಡಾಯ್ತು : ಮಾಘಬಹುಳದ
ಚತುರ್ದಶೀ ದಿನದಂದು ಶಿವರಾತ್ರಿ—ನೆನಪಿರಲಿ
ಮೂರು ದಿನವಿಹುದಿನ್ನು ! ಮಹಾಲಿಂಗಪೂಜೆಯಲಿ
ದೇವನಂಜುಂಡ ಶಿವಯೋಗವ್ರತದಿಂದ ಬಹಿ
ರ್ಮುಖನಾಗುವನಂದೇ ಬ್ರಾಹ್ಮೀ ಮುಹೂರ್ತದಲಿ.
ಆ ಪುಣ್ಯಸಮಯದಲಿ ಸೇರುವರು ದೇವಗಣ
ಬ್ರಹ್ಮನಾರಾಯಣರು ಶಾರದಾ ಲಕ್ಷ್ಮಿಯರು
ಪ್ರಮಥಗಣ ಗಂಧರ್ವರೇಕಾದಶರುದ್ರರೂ
ಸೂರ್ಯಚಂದ್ರರು ಗ್ರಹೋಪಗ್ರಹವ್ಯೂಹಮಲ್ಲದೆ
ನೆರೆವರಲ್ಲಿ ದಿಕ್ಪಾಲಕರು ಮೇಣ್ ದೇವಋಷಿ
ಕುಲ ಸಿದ್ಧಸಾಧ್ಯರು ನಿಶಾಚರರು. ಶಂಕರನ
ದರ್ಶನದಿಂ ಕೃತಾರ್ಥರಹರೆಂದು ಮಹಾನಂದ
ಭಾವದಲಿ ! ಅಂದೆಮ್ಮ ತಪಃಫಲ ಸಿದ್ಧಿಪುದು !

ದಧೀಚಿ—ಅಲ್ಲಿ ಕಾಣುತಿದೆ ನೋಡಿ ! ಬಹುದೂರದಲಿ ಧ್ರುವ
ತಾರೆ ಬಡಗದಿಸೆಯಲಿ ! ಸುತ್ತೆಲ್ಲ ನೋಡಿರಿ
ಬೆಳಗುತಿವೆ ದಿಕ್ಪಾಲನಗರಿಗಳು ಅಲ್ಲಲ್ಲಿ !
ಅಲ್ಲಿಕಾಂಬುದು ಬ್ರಹ್ಮಲೋಕ ! ಅದರಾಚೆಯಲಿ
ಬಲಗಡೆಯೆ ತೋರುತಿದೆ ವೈಕುಂಠ ಶುಭಧಾಮ !

ತಲೆಯೆತ್ತಿಗವನಿಸಿರಿ ಸೃಷ್ಟಿವೈಭವವಲ್ಲಿ
ಮೆರೆಯುತಿದೆ ; ಸೌರವ್ಯೂಹತಾರಾಮಂಡಲಂ
ಕೋಟ್ಯನುಕೋಟಿ ನೀಹಾರಕಾಂತಿಯಲಿ !

ಋಷಿಗಣ—ಏನಿದದ್ಭುತ ದೃಶ್ಯ ! ಪರಂಜ್ಯೋತಿಪ್ರಕಾಶ !
ಶಿವಶಿವಾ ! ಮಾನವನ ರೂಪಿನಲಿ ನೀ ನಿನ್ನ
ಈ ಸೃಷ್ಟಿ ರಹಸ್ಯವನು ಭೇಧಿಸಲರಿಯೆಯಾ !
ಆದಿ ಮಧ್ಯಾಂತ್ಯರಹಿತ ಪರಮಾತ್ಮಾ ನಿನ್ನ
ಶಕ್ತಿಯಲಿ ಚ್ಯುತಿಯಿಲ್ಲ ನಿನ್ನಲ್ಲಿ ಕೂಡಿಹುದು
ಶಕ್ತಿ ಅವಿನಾಭಾಸಂಬಂಧದಿಂ ಸದಾ !
ಈ ಶಕ್ತಿವಿಶಿಷ್ಟ ಶಿವಸಂಕಲ್ಪವೆ ಸೃಷ್ಟಿ !

ಜಮದಗ್ನಿ—ಭೂಲೋಕ ಚಂದ್ರಮಂಡಲಗಳೇಂ ದೂರವೇ !
ಮಾನವನು ತಿರುಗುವನು ಗ್ರಹವ್ಯೂಹ ಪಥದಲಿ
ಕಲಿಯುಗ ಕಾಲದಲಿ ! ಹಿಂದೆ ಕೃತತ್ರೇತದಲಿ
ಮತ್ತಿಂದು ದ್ವಾಪರದ ಕಾಲದಲಿ ಮಾನವನು
ಸ್ವರ್ಗಪಾತಾಳ ಭೂಮಿತ್ರಯಲೋಕಂಗಳಲಿ
ಯೋಗಶಕ್ತಿಯಿಂ ನಡೆದಾಯ್ತು !ಕಲಿಕಾಲವೇಂ
ಸಾಮಾನ್ಯಮಲ್ತು ! ಆಧ್ಯಾತ್ಮಸಿದ್ಧಿಯಂತೆಯೆ
ವಿಜ್ಞಾನ ಋಷಿವೃಂದ ತಪಗೈದು ಕಲಿಯುಗದಲಿ
ಸಾಧಿಸುವುದು ಸಿದ್ಧಿಯನುಸೌರಗಣಯಾತ್ರೆಯಲಿ
ವಿಜ್ಞಾನ ದರ್ಶನಂ ಬ್ರಹ್ಮಸಾಕ್ಷಾತ್ಕಾರಮಾರ್ಗಂ
ಈ ಸೃಷ್ಟಿ ರಹಸ್ಯದ ಭೇದನಂ ವಿಜ್ಞಾನಂ !

ಕಶ್ಯಪ—ಅಂತಲ್ತೆ ! ಅಂತಲ್ತೆ ! ಕಲಿಧರ್ಮಯುಗದಲ್ಲಿ
ಆಧ್ಯಾತ್ಮಸಿದ್ಧಿ ತಪವಿಲ್ಲ, ಮೇಣ್ ಎಲ್ಲೆಲ್ಲು
ವಿಜ್ಞಾನ ಋಷಿವೃಂದ ಪ್ರಯೋಗ ಪರ್ಣಶಾಲೆ
ಗಳಲ್ಲಿ ಗ್ರಹವ್ಯೂಹ ರಚನೆಗಳ ಪರಿಕಿಸುತ

ಅಣುರೇಣು ತೃಣಕಾಷ್ಠ ಪಿಪೀಲಿಕ ಬ್ರಹ್ಮದಲಿ
ಪಂಚಭೂತಾತ್ಮಗಳ ಸಾಲಿನಲಿ ಅಡಗಿರ್ಪ
ನಿಗೂಢತರ ಶಕ್ತಿಯನು ಸೂಕ್ಷ್ಮದರ್ಶಕ ಯಂತ್ರ
ದಲಿ ಕಂಡು ದೂರದರ್ಶಕಯಂತ್ರದಲಿ ಸಮಸ್ತ
ಗ್ರಹರಾಶಿಯಂ ನೋಡಿ 'ಕ್ಷಿಪಣಿ' ಯಾನದಲಿ
ಮನೋವೇಗದಲಿ ಪಯಣಮಾಳ್ಪಂ ಮಾನವಂ !
ಚಂದ್ರಾದಿಗ್ರಹಗಳಂ ಮೆಟ್ಟಿ ಬರುವನು ಬೇಗ
ವಿಜ್ಞಾನ ಪಡೆಯುವುದು ಅಧ್ಯಾತ್ಮ ಸಿದ್ಧಿಯಂ

ಜಮದಗ್ನಿ—ಅಂತಾದೊಡೇಂ ತಿರೆಯ ಋಷ್ಯಾಶ್ರಮಗಳಿಲ್ಲ
ಗುರುಕುಲಗಳಿಲ್ಲ ಯೋಗದಂಡದ ಗೋಜಿಲ್ಲ
ಕಮಂಡಲಧಾರಿಗಳ ಸುಳಿವಿಲ್ಲ ಕಲಿಕಾಲ
ಸಂದುದು ! ನಮಗೇಕೆ ಕಲಿಯುಗದ ಬಹುಚಿಂತೆ !
ವಿಜ್ಞಾನ ಬ್ರಹ್ಮಋಷಿ ಪಡೆದ ಅಣುಶಕ್ತಿಯೇ ಕಿರಿದಲ್ಲ ;
ಪ್ರಳಯಾಗ್ನಿ ಲೋಕವನು ಸುಡುವಂತೆ ನಿಮಿಷದಲಿ
ಅಣುಶಕ್ತಿ ಸೃಷ್ಟಿಯಂ ಸುಟ್ಟುರಿಸಿ ಭೂಮಿಯಂ
ಭಸ್ಮಗೈವುದಚ್ಚರಿಯಲ್ತು ಕಶ್ಯಪಾರ್ಯ !

ಅಗಸ್ತ್ಯ—ಆಮಾತದಂತಿರಲಿ ! ದೇವನ ಲೀಲೆ
ನಾವಿಂದು ಬಹುದೂರದ ದ್ವಾಪರದಲಿಹೆವು
ಕಲಿಯುಗದ ಮಾತೇಕೆ ! ಅಲ್ಲಿ ನೋಡಿರಿ ಸಸ್ಯ
ಶ್ಯಾಮಲೆ ಭಾರತಾಂಬೆಯ ಪುಣ್ಯಮೂರ್ತಿಯನು
ಸಪ್ತಸಾಗರಗಳುಂಟಲ್ಲಿ ಸಪ್ತಕುಲಗಿರಿ
ಗಳುಂಟಲ್ಲಿ ಪಾವನತಮ ಕ್ಷೇತ್ರಗಳುಂಟು
ಗೋಕರ್ಣ ತಿರುಪತಿ ಹರಿದ್ವಾರ ಶ್ರೀಶೈಲ
ಹಂಪೆ ನಂಜನಗೂಡು ಉಡುಪಿ ಸುಬ್ರಹ್ಮಣ್ಯ
ಶ್ರೀರಂಗ ಚಿದಂಬರ ಕನ್ಯಾಕುಮಾರಿ ಜಯ
ರಾಮೇಶ್ವರ ಕಾಶಿ ಜಗನ್ನಾಥಂ ಪಳನಿ

ಧರ್ಮಸ್ಥಳ ಶ್ರವಣಬೆಳುಗೊಳ ಹೊಂಬುಜಂ ಮೇಣ್
ಸಮ್ಮೇಧಗಿರಿ ನಂದಿ ಮಾದೇಶ್ವರನ ಬೆಟ್ಟ
ಉಜ್ಜಯಿನಿ ಶಿವಗಂಗೆ ಸಿದ್ಧಗಂಗಾಚಲಂ
ಮೈಲಾರ ರೇವಣಾದ್ರಿ ಭವ್ಯ ಕ್ಷೇತ್ರಗಳ
ದರ್ಶನಂ ಗೈಯುತ್ತ ಬನ್ನಿರೌ ಋಷಿವರರೆ
ನೋಡಿ ತಣಿಯಿರಿ ಇಲ್ಲಿ, ಮುಂಗಡೆಯ ದಿಕ್ಕಿನಲಿ
ಜಯ ಬದರಿನಾರಾಯಣ ಕ್ಷೇತ್ರ ಮುಂದಲ್ಲಿ
ಪವಿತ್ರತಮ ಕೇದಾರನಾಥಲಿಂಗಕ್ಷೇತ್ರ
ಧಾಮದಲಿ ಪೂಜೆಗೊಂಬುದು ಜ್ಯೋತಿರ್ಲಿಂಗ
ಹಿಮರಾಶಿ ಮಧ್ಯದಲಿ ಕಲ್ಪಕೋಟಿಕಾಲಾ
ವಧಿಯಿಂದ ದೇವದಾನವಯಾತ್ರೆ ನಡೆಯುತ್ತ
ಅಲ್ಲಿ ಕಾಂಬುದೆ ನೋಡಿ ! ದಕ್ಷಿಣಾಮೂರ್ತಿ ಋಷಿ
ಶಂಕರನು ತಪಗೈದು ಮನ್ಮಥನ ಸುಟ್ಟುರುಹಿ
ರತಿಗೆ ಪತಿಭಿಕ್ಷೆಯಂ ನೀಡಿ ಪಾರ್ವತಿಯ ಕೈ
ಹಿಡಿದ ತಾಣಂ ದೇವಗಣ ಜಯಮೆನಲು ದೇವ
ದುಂದುಭಿ ಮೊಳಗುತಿರೆ ಲೋಕಹಿತ ಕತದಿಂದ

ಜಮದಗ್ನಿ—ಗುರುದೇವ ! ಪಯಣವಿನ್ನೆಷ್ಟು ಯೋಜನವುಂಟು !
ತ್ರಯೋದಶಿ ಇಂದಾಯ್ತು ! ಗೋಚರಿಸಲಿಲ್ಲ ಶ್ರೀ
ಕೈಲಾಸ ಮಹಾ ಪುಣ್ಯ ವಿಲಾಸವೆತ್ತಲುಂ !
ದಾರಿತಪ್ಪಿಹುದೇನೊ ಬೃಂದಾರಕಪಥದಲಿ !

ಅಗಸ್ತ್ಯ—ಅಳುಕದಿರಿ ಮುನಿವರರೆ ! ಅಲ್ಲಿಕಾಂಬುದು ಮುಂದೆ
ದಿವಿಜ ಗಂಗೆಯು ತೌರು ಗಂಗೋತ್ರಿ ! ಆದರಾಚೆ
ಕೈಲಾಸಧಾಮ ಸೀಮಾರೇಖೆ ಪಡುವಲಲಿ !
ಏರಿಬನ್ನಿರಿ ಹಿಮಶೃಂಗವನು ! ನಿಂತಲ್ಲಿ ನೋಡಿರಿ
ಕಾಂಬುವುದು ಕೈಲಾಸ ಮಹಾದ್ವಾರ ಗೌರೀ
ಶಂಕರ ಶಿಖರದತ್ತ ಮೂಡಲಲಿ ಸನಿಹದಲಿ !

ಅಲ್ಲಿ ನಿಂತಿಹನು ಧವಳಾಂಗ ನಿಜಭಕ್ತ ಆ
ನಂದೀಶಪ್ರಮಥಗಣ ಪುಂಗವಂ ಧರ್ಮವೇ
ವೈವೆತ್ತು ಬಂದಂತೆ ! ಮಹೋನ್ನತ ಶಿವತತ್ತ್ವ
ರತ್ನಾಕರಂ ದ್ವಿತೀಯ ಶಂಕರ ರೂಪದಿಂ
ಓಂಕಾರ ವೊಳಗುತಿದೆ ಆಲಿಸಿರಿ ಮುನಿವರರೆ !

ಋಷಿಗಳು—"ಜಯನಮಃ ಪಾರ್ವತೀಪತಯೇ ಹರಹರ ಮಹಾದೇವಾ"

ಕಶ್ಯಪ—ಏರಿಬನ್ನಿರಿ, ಹಿಂದೆ ನಿಲ್ಲದಿರಿ ಸಮನಿಸಿತು
ಕೈಲಾಸ ಸನ್ನಿಧಿಯು ! ಉಘೇ ! ಉಘೆ ! ಜಯಘೋಷ
ವೊಳಗಿಸಿರಿ ಮುನಿವರರೆ ! ಆನಂದ ಭಕ್ತಿಯಲಿ

ಋಷಿಗಣ—ಜಯ ಪಾರ್ವತೀ ಕಾಂತ ಪರಮೇಶ ಜಯಮಕ್ಕೆ !
ಜಯಮಕ್ಕೆ ! ಜಗದೀಶ ಪ್ರಮಥೇಶ ಸಂಪೂಜ್ಯ !

(ಎಂದು ಋಷಿಗಣ ನಿಷ್ಕ್ರಮಣ)

ನಂದೀಶ—(ಇನ್ನೊಂದುಕಡೆಯಿಂದ ಪ್ರವೇಶ)
ಓ ನಮಃ ಶಿವಾಯ ! ಹರ ಶಂಭೋ ! ಮಹಾದೇವ !

ಭೃಂಗೀಶ—(ಇದಿರುಗಡೆಯಿಂದ ಪ್ರವೇಶ)
ಓಂ ನಮಃ ಶಿವಾಯ ಹರಹರ ಶಿವ ಮಹಾದೇವ !

ನಂದೀಶ—ಸಾಷ್ಟಾಂಗ ಪ್ರಣಾಮಂ ! ಭೃಂಗೀಶ ಪ್ರಮಥವರ !

ಭೃಂಗೀಶ—ಶಿವಧರ್ಮಾಭಿವೃದ್ಧಿರಸ್ತು ನಂದೀಶ್ವರ !

ನಂದೀಶ—ಶಿವನ ಕಲ್ಪಾಂತ ಯೋಗಸಮಾಧಿ ನಾಳಿಂಗೆ
ಪರಿಪೂರ್ಣಮಕ್ಕು ಭೃಂಗೀಶ. ದೇವದಾನವ
ಗರುಡಗಂಧರ್ವ ಖೇಚರ ವಿದ್ಯಾಧರ ವ್ಯೂಹ
ಕಿಂಪುರುಷ ಕಿನ್ನರ ದಿವಿಜ ಋಷಿಗಣ ಪ್ರಮಥಗಣ

ಮಹಾಭಕ್ತ ತಿಂಥಿಣಿ, ಸಿದ್ಧ ಸಾಧಕರು ಮೇಣ್
ಭೂಲೋಕ ಋಷಿವರರು ಬರುತಿಹರು ಯೋಗೀಶ
ಶಂಕರನ ದರ್ಶನ ಭಾಗ್ಯದಿಂ ಧನ್ಯರೆನಿಸಲು !
ಸ್ವಾಗತವ ನೀಡುವೆನು "ಅತಿಥಿ ದೇವೋಭವಂ."
ಕೈಲಾಸ ತೇಲುತಿದೆ ಶಿವಾನಂದಾಬ್ಧಿಯಲಿ.

ಭೃಂಗೀಶ—ಎಲ್ಲ ಕಲ್ಪಾಂತ ಶಿವಯೋಗದಂತಲ್ಲ ವೀ
ಕಲ್ಪಾಂತ ಪೂಜೆ ಭಾವಿಸಲು ನಂದೀಶ್ವರಾ !
ದ್ವಾಪರದ ಕಡೆಯು ಕಲ್ಪದ ಪೂಜೆ ಈ ಪೂಜೆ !
ಶಬರಶಂಕರ ಲೀಲೆಯಿಂ ಭೂಮಿಗವತರಿಸಿ
ಪರಮಾತ್ಮ ರಕ್ಷಿಪನು ಭಕ್ತರಂ ಕರುಣದಿಂ !

ನಂದೀಶ—ಶುಭಮಕ್ಕೆ ! ಶಂಕರನ ಅವತಾರ ಲೀಲೆಯಲಿ
ನಾವೆಲ್ಲ ಸೇರೋಣ ಭೂಲೋಕ ರಂಗದಲಿ

ಭೃಂಗೀಶ—(ಮುಂದೆ ನೋಡಿ)
ಭೂಲೋಕ ಋಷಿವರರು ಇತ್ತಲೇ ಬರುತಿಹರು
ನೋಡಿದೆಯ ನಂದೀಶ ! ಅಧ್ಯಾತ್ಮ ತಪೋಗಣ
ಚಲಿಸುತಿದೆ ಶಂಕರನ ದರ್ಶನಾಕಾಂಕ್ಷೆಯಲಿ !

ಋಷಿಗಣ—(ಪ್ರವೇಶಿಸಿ)
ನಮೋನ್ನಮಃ ಪ್ರಮಥವರೇಣ್ಯರೇ !

ನಂದೀಶ—ಸ್ವಾಗತಂ ಸುಸ್ವಾಗುತಂ ಮಹರ್ಷಿ ಪೂಜ್ಯರೇ !
ನಮಸ್ತುಭ್ಯಂ ನಮಸ್ತುಭ್ಯಂ ! ನಮೋನ್ನಮಃ !

ಭೃಂಗೀಶ—ಶುಭಮಸ್ತು ! ನಿತ್ಯ ಶುಭಮಸ್ತು ! ಋಷಿಪೂಜ್ಯರ್ಗೆ !

ಅಗಸ್ತ್ಯ—ಧನ್ಯರಾದೆವು ನಾವು ಪ್ರಮಥಗಣ ಪೂಜ್ಯರೇ !]

ನಂದೀಶ—(ಮಂತ್ರ ಘೋಷ—ತೆರೆಯ ಹಿಂದೆ)
ಪೂಜಾಸಮಯಂ ಋಷಿವರರೆ ! ಬನ್ನಿ, ತೆರಳೋಣ.

ಅಗಸ್ತ್ಯ—ಶುಭೋದಯ ಸಂಕೇತವೆಂಬಂತೆ ಕೇಳುತಿದೆ
ಘಂಟಾರವಂ ಯೋಗಭೂಮಿಯಲಿ, ನಂದೀಶ ?
ಏಕಾಂತದಲಿ ಶಿವನ ಸಂದರ್ಶನವ ಗೈದು
ಬೇಡುವೆವು

ನಂದೀಶ— ನಾಳೆ ಕೈಲಾಸ ಬಿಲ್ವವನದಲಿ
ಶಂಕರನ ದರ್ಶನಂ ಗೈದು ಬಿನ್ನವಿಸಿ ಋಷಿ
ವರರೆ ನಿಮ್ಮಂದವನು ಶಿವನ ಸನ್ನಿಧಿಯಲಿ !

ಅಗಸ್ತ್ಯ—ಧನ್ಯರಾದೆವು ನಾವು ನಂದೀಶ ಭೃಂಗೀಶ
ಪ್ರಮಥಗಣವರರೆ ಸಂಕಲ್ಪ ಸಿದ್ಧಿಸಿತು

(ಎಲ್ಲರೂ ತೆರಳುವರು) (ತೆರೆ ಬೀಳುವುದು)

## ದೃಶ್ಯ ೪

[ಬಿಲ್ವವೃಕ್ಷದ ಅಡಿಯಲ್ಲಿ ಶಿವಪಾರ್ವತಿಯರು ವೀರಸಿಂಹಾಸನದಲ್ಲಿ ಮಂಡಿಸಿರುತ್ತಾರೆ. ಪಾರ್ವತಿ ಹೂವಿನ ಗೊಂಚಲನ್ನು ಹಿಡಿದುಕೊಂಡು ಶಿವನಿಗೆ ಗಾಳಿ ಬೀಸುತ್ತಿರುವಳು. ಗಣಪ ಷಣ್ಮುಖರು ಅಲ್ಲಲ್ಲಿ ತಿರುಗಾಡುತ್ತಿರುವರು]

(ತೆರೆಯ ಮುಂದೆ)

ನಂದೀಶ—ಪರಮಾತ್ಮ ! ತಪೋಜನ ವೃಂದ ವೈತಂದು ಎಲೆ
ಮನೆಯ ಬಿಡದಿಯಲಿ ತಂಗಿ ಪೂಜಾನುಷ್ಠಾನ
ಕಾರ್ಯವನು ಮುಗಿಸಿ ಭಕ್ತಿಯಿಂ ಕಾದಿಹುದು
ಸನ್ನಿಧಿಯ ದರ್ಶನಂಗೈಯಲ್ಕೆ ಬಾಗಿಲಲಿ.

ಶಂಕರ—ಎಲ್ಲರಂ ಸ್ವಾಗತಿಸು ಗೌರವದಿ ನಂದೀಶ!

ನಂದೀಶ—ಮಹದಾಜ್ಞೆ ! (ಮುಂದೆಹೋಗಿ) ಸುಸ್ವಾಗತಂ ಬನ್ನಿ ತಾಪಸರೆ !

ಋಷಿಗಣ—(ಪ್ರವೇಶಿಸಿ)
ಜಯಜಯ ಮಹಾದೇವ ಪರಮಾತ್ಮ ವಂದಿಸೆವು
(ದೀರ್ಘದಂಡ ಪ್ರಣಾಮ ಮಾಡುವರು)

ಶಂಕರ—(ಅಭಯಹಸ್ತದಿಂದ)
ಶುಭಮಸ್ತು ! ಸರ್ವ ಶುಭಮಸ್ತು ಋಷಿಪುಂಗವರೆ !

ಅಗಸ್ತ್ಯ—ಜಯಜಯಾ ! ಜಾಹ್ನವೀಧವ ಜನಾರ್ದನ ಪೂಜ್ಯ
ನಿರಂಜನ ನಿಗಮಸ್ತುತ ಭುಜಗೇಂದ್ರಭೂಷಣ
ಚತುರ್ದಶಭುವನಪತಿ ಶಶಾಂಕ ಶೇಖರಾ !
ಗಗನಕೇಶ ನಾರದ ತುಂಬುರ ಪರಕಂಬಲ
ಗಾನಲೋಲ ಗರಾಂಕಿತಕಂಧರ ಉಮಾಧವ !
ಮುನಿವಂದ್ಯ ಮುಕ್ತಿಭಾಮಿನಿಯಕಾಂತ ಕಪರ್ದಿ
ಮಂಗಳಾಂಗ ಗೌರೀಧವ ರಕ್ಷಿಪುದೆಮ್ಮನು !

ಕಶ್ಯಪ—ಮೃತ್ಯುಪಾಶವನು ಹರಿದು ಯಮನಂ ದಂಡಿಸುತ
ರಕ್ಷಿಸಿದೆ ಮೃಕಂಡುಸುತ ಮಾರ್ಕಂಡೇಯನಂ
ಕುಟಿಲ ಕುಸುಮ ಕೋದಂಡಧಾರಿ ರತೀಧವನ
ದೇಹವನು ಉರಿಗಣ್ಣಿನಿಂ ಸುಟ್ಟು ತಾರಕನ
ಸಂಹಾರಕಾರಣ ಕುಮಾರನಂ ಪಡೆದಾಯ್ತು !
ಲೋಕಕಲ್ಯಾಣವಾಯ್ತೆಂದು ನಿನ್ನ ಕೃಪೆಯಿಂದ.

ಜಮದಗ್ನಿ—ದೇವದಾನವರಂದು ಸಾಗರವ ಮಥಿಸಲ್ಕೆ
ಹಾಲಾಹಲಂ ಸಂಜನಿಸಿ ಲೋಕವೆಲ್ಲವನು
ದಹಿಸುವಂತಿರೆ ನೀನು ಲೀಲೆಯಿಂದಾ ವಿಷವ
ಪಾನಮಾಡಿ ನಂಜುಂಡನೆನಿಸಿದೆ ಮಹಾದೇವ !

ಅಂಧಕಾಸುರನ ಮೆಟ್ಟಿ ತಾಂಡವ ನೃತ್ಯವನು
ಗೈದು ಲೋಕವನು ಸಲಹಿದೆಯೆಂದು ವಿಶ್ವನಾಥ !

**ದೂರ್ವಾಸ**—ತ್ರಿಪುರಾಸುರರ ಥಾಳಿಯನು ಪರಿಹರಿಸಲೆಂದು
ಭೂರಥದಲಿ ಕುಳಿತು ಮೇರುಚಾಪದಲಿ ಹರಿ
ಬಾಣವನು ಹೂಡಿ ಬ್ರಹ್ಮ ಸಾರಥಿಯಾಗಿರಲು
ನೀನಂದು ಮುಪ್ಪೊಳಲನುರುಪಿದ್ಪೆ ಮೃತ್ಯುಂಜಯ ;
"ಮೂಲೋಕಮನಳುರ್ವ ಮಹಾಗಂಗೆಯಂ" ನೀಂ
ಜಟಾಮಕುಟದಲಿ ಧರಿಸಿ ಗಂಗಾಧರನಾದೆ

**ದಧೀಚಿ**—ದಿವಿಜರನು ಪೀಡಿಸುತ ಸುರಕಾಂತೆಯರನು ಸೆರೆ
ಗೈಯ್ದು ಲೋಕಕಂಟಕನೆನಿಸಿದ್ದ ಜಲಂಧರ
ರಕ್ಕಸನ ಚಕ್ರಾಯುಧದಿಂದ ಸಂಹರಿಸಿ ಹದಿ
ನಾಲ್ಕುಲೋಕಗಳ ರಕ್ಷಿಸಿದೆ ನೀಂ ದಯಾನಿಧಿ !
ಕೈಲಾಸಗಿರಿಯನ್ನು ಪೊತ್ತೆತ್ತೆ ಲಂಕೇಶ
ರಾವಣನು ನೀನಂದು ಅಂಗುಷ್ಠ ಮಾತ್ರದಿಂ
ಗಿರಿಯನೊತ್ತಲು ಬಳಲಿ ಕಿರಿಚಿದನು ಬೆಟ್ಟದಡಿ
ಯಲಿಪ್ಪತ್ತು ಕೈಗಳು ಸಿಕ್ಕಿರಲು ನೀನಾಗ ಕರುಣಿಸಿದೆ !
ನಿನಗಾರು ಸಾಟಿ ! ನಾಗಭೂಷಣ ಪ್ರಮಥೇಶ !
ನಿನ್ನಿರವನರಿವರಾರು ವಿಶ್ವದಲಿ ಗಿರೀಶ !

**ಸಾನಂದ**—ಉರುಲಿಂಗದಾಕಾರದಲಿ ನೀನಿರಲು ವಿಷ್ಣು
ವಿರಂಚಿಗಳರಿಯದಾದರು ನಿನ್ನ ಪಾದವನು
ಮೌಳಿಯನು ! ವೇದತತಿ ಕೀರ್ತಿಸಲರಿಯದಾಯ್ತು !
ತಿಳಿಯೆ ಮೂವತ್ತಾರು ತತ್ತ್ವಗಳ ತುದಿಯಲ್ಲಿ
ನಿಂದವನು ನೀನೆ ಮೇಣ್ ನಿತ್ಯೋಜ್ವಲ ರೂಪದ
ಪಂಚಬ್ರಹ್ಮಮೂರ್ತಿ ಪ್ರಕಟಿತ ವಿಭವನು ಸುರ
ನರ ಭೋಗ ಮೋಕ್ಷಪ್ರದನೆನಿಸಿದವನು ನೀನೆ

ಕಾರುಣ್ಯಸಿಂಧು ! ಆನತಾರ್ತ ಜನ ಬಂಧು !
ಕಾಲಾಂತಕ ಪರಮೇಶ ಪಾಲಿಸು ಶರಣರನು !
(ಎಲ್ಲರೂ ಅಡ್ಡಬೀಳುವರು)

ಶಂಕರ—ಯಾವ ಗಿರಿಯಲಿದೆ ನಿಮ್ಮ ತಪೋವನಂ ತಿಳಿಸಿ ?
ನೀವೇಕೆ ಬಂದಿಹಿರಿ ಪರ್ಣಶಾಲೆಗಳ ಬಿಟ್ಟು
ಅಲ್ಲೇನು ಭಯವುಂಟು, ರಾಕ್ಷಸರ ಬಾಧೆಯೋ ?
ವನ್ಯಮೃಗ ಕಂಟಕವೆ ? ಅಂಜದಿರಿ ಬಿನ್ನವಿಸಿ
ಏಳಿರೈ ಭಯವಿಲ್ಲ ಕೈಲಾಸಧಾಮದಲಿ

ಕಶ್ಯಪ—ಸರ್ವಜ್ಞ ಸದಾಶಿವ ಅವಧರಿಸು ಬಿನ್ನಪವ-
ಸಪ್ತ ಕುಲಗಿರಿ ಕೂಟ ಮಣಿಮಕುಟವೆಂಬಂತೆ
ಎಸೆದಿಹುದು ಇಂದ್ರಕೀಲಾಚಲಂ ತೆಂಕಲಲಿ.
ಅಲ್ಲಿಹುದು ನಮ್ಮ ನಿಜತಪೋಭೂಮಿ ಪುಣ್ಯಾ
ರಣ್ಯ ಪ್ರಾಂತದಲಿ, ನದಿಯ ತೀರದ ಬೀಡಿನಲಿ.
ಅಲ್ಲಿಗೊರ್ವ ವೀರಮುನಿ ಬಂದಾಯ್ತು ಮಹದೇವ !
ಹೇಳಲರಿಯೆವು ನಾವು ಆ ಮುನಿವರನ ತಪೋ
ವಿಧಾನವನು ! ಅವನೇನು ನರನೋ ! ದಿವಿಜನೋ !
ರಾಯನೋ ವೀರರಾಹುತನೋ ! ವಿಚಾರಿಸಲು
ಋಷಿಯಲ್ಲವೆಂಬುದೇ ಖಚಿತವಾದಂತಾಯ್ತು !
ಮುನಿಯಾದೊಡೇಕವಗೆ ಬಿಲ್ಲು ಬತ್ತಳಿಕೆಗಳು ?

ಅಗಸ್ತ್ಯ—ದೇವದೇವಾಧಿಪನೆ ! ಆ ತಾಪಸಿಯ ನೋಡೆ
ಋಷಿವರರು ಹೆದರಿದರು ಬೆದರಿದರು ಭಯದಲ್ಲಿ
ಆ ಮಹರ್ಷಿಯ ತಲೆಯಲ್ಲಿ ಜಟಾಮಕುಟವಿಲ್ಲ
ಮೆರೆದಿಹುದು ರಾಜಮಕುಟ ! ಥಳಥಳಿಸೆ ಕಟಿಯಲ್ಲಿ
ವೀರ ಖಡ್ಗ ಕಠಾರಿ ಒಪ್ಪಿಹವು ! ಕಾಂಬುವನು
ಹೊಸಜವ್ವನದ ಮಿಸುಪ ಸೌಂದರ್ಯ ನಿಧಿಯಂತೆ !

ವೀರಗಾಸೆಯನುಟ್ಟು ಮಹಾ ಧೃಢಕಾಯದಲಿ
ಬಂದನಲ್ಲಿಗೆ ಹನ್ನೊಂದು ಮಾಸಗಳ ಹಿಂದೆ

ಜಮದಗ್ನಿ—ಆ ತರುಣ ಮುನಿ ಬಂದು ಚರಿಸುತ್ತ ವನದಲ್ಲಿ
ಮಿಂದು ವಿಧ್ಯುಕ್ತ ರೀತಿಯಲಿ ತೀರ್ಥಜಲದಲಿ
ಶೈವವ್ರತವ ಕೈಗೊಂಡು ವಿಭೂತಿ ರುದ್ರಾಕ್ಷ
ಮಾಲೆಗಳ ಧರಿಸಿ ಬಿಲ್ವವೃಕ್ಷದ ನೆರಳಿನಲಿ
ನಿಂದು ಶಿವಭಕ್ತಿಯೇ ಮೂರ್ತಿವೆತ್ತಂತಿರಲು
ರಾರಾಜಿಸಿದನಲ್ಲಿ ರಾಜ ತೇಜೋಮೂರ್ತಿ
ಪರಶಿವನ ಪರಮಪಾವನ ಪಾದ ಚಿಂತೆಯಲಿ !

ಸಾನಂದ—ಆ ತಪದ ವೈಖರಿಯ ನಾವೇನಬಲ್ಲೆವು !
ಅರೆಮುಗುಳ್ದಕ್ಷಿಗಳು ಸದಾ ಮಿಡುಕುಗುಂದವ
ಚೆಂದುಟಿಗಳು ಕಾಣುತಿರೆ ಖಡ್ಗಾಸನದಲಿ
ಧ್ಯಾನಮಗ್ನನಾಗಿರ್ದ ವಿಪರೀತವೇಷದಲಿ
ಬೆರಗಾದರೆಲ್ಲ ತಾಪಸರು ಬಹುಚಿಂತೆಯಲಿ !

ಕಶ್ಯಪ—ಮಾಸ ಒಂದಾಯ್ತು ! ಎರಡಾಯ್ತು ! ಮೂರಾಯ್ತುವೇಣ್
ಷಣ್ಮಾಸಕಳೆದಾಯ್ತು ! ಆ ಮುನಿಯು ಚಲಿಸದೆಯೆ
ನಿಶ್ಚಲ ಮನೋಭಾವದಲಿ ಚಿಂತಿಸಿ ಜ್ಞಾತೃ
ಜ್ಞಾನಜ್ಞೇಯಕತೀತನಾದ್ಯಾಂತಶೂನ್ಯನಂ
ಪರಂಜ್ಯೋತಿ ಸ್ವರೂಪನಂ ನೆನೆಯುತಿರ್ದಂ ;

ದಧೀಚಿ—ಚಿಂತಿಸಿದನಾತರುಣ ಯೋಗೀಶ ಚಿತ್ತದಲಿ
ನಿರ್ಮಲಾನಂತ ತತ್ತ್ವಮಯನಂ ಪರಮಾತ್ಮ
ಚಂದ್ರಚೂಡನಂ ಗಿರಿಜಾರಮಣನಂ ಸದಾ
ಅಪ್ರಮೇಯನಂ ಮುನಿಜನ ಮಾನಸ ಸರೋವರ
ಹಂಸನಂ ಚಿದಾನಂದರೂಪನನಂತನಂ
ಚಿದಚಿತ್ರ ಪಂಚರಂಜನನದ್ವಿತೀಯನಂ

**ದೂರ್ವಾಸ**—ಆರುದಿನಕೊಪ್ಪತ್ತು ಫಲಹಾರಮಾಯಿತು
ಮೂರನೆಯ ಮಾಸದಲಿ ಕಂದ ಮೂಲಂಗಳನು
ಮೆಲ್ದು ಮೇಣ್ ತರಗೆಲೆಯ ಸೇವನೆಯಲಿ ಕಳೆದನು
ನಾಲ್ಕನೆಯ ತಿಂಗಳನು ; ಮುನಿಜನರು ಬೆರಗಾಗೆ
ಐದನೆಯ ತಿಂಗಳಲಿ ವಾತಾಶನಂ ಬಂತು
ವೀರ ತಾಪಸಿಯು ಕಟ್ಟುಗ್ರ ತಪಕೆಣೆಯುಂಟೆ
ಶಿವಶಿವಾ ! ಹಿಂದೆ ಕಾಣೆವು ಮುಂದೆ ನೋಡಲಾ
ರೆವು ಇಂಥ ವಿಚಿತ್ರ ರೀತಿಯ ಕ್ಷಾತ್ರಮುನಿಯನು !

**ಜಮದಗ್ನಿ**—ಆ ಮಹೋಗ್ರ ತಪದಿಂದ ಭೂಮಿ ಬಿಸಿಯಾಯ್ತು ;
ನಡುಗಿದರು ದಿಕ್ಪಾಲರು ಸುರರಲ್ಲಾಡಿದರು
ನಗಪ್ರಂದ ಕಾಯ್ಪುಗೊಂಡಿತು ಜಲಧಿ
ಸಂಪುಟ ತಳಮಳಿಸಿತು ಭಾನುಮಂಡಲದ ಶಾಖ
ಮಂಕಾಯ್ತು ಹಿಮಕರನ ಬೆಳಕೆಲ್ಲ ಹಬೆಯಾಯ್ತು
ಪಂಚಭೂತಗಳೆಲ್ಲ ಸೊರಗಿದುವುದಿನದಿನಕೆ
ಕೊರಗಿದುವು ಜೀವ ಜಾಲಗಳೆಲ್ಲ ಜಗದಲಿ
ಉಗ್ರತಪೋಗ್ನಿಜ್ವಾಲೆ ಪಸರಿಸೆ ದಿಸೆದಿಸೆಯೊಳು !

**ಸಾನಂದ**—ಲಿಂಗಾಂಗ ಸಾಮರಸ್ಯವ ತಳೆದ ಶಿವಯೋಗಿ
ಯಂತೆ ಶಿವನೆತಾನಾದನೋ ತಾನೇ ಶಿವ
ನಾದನೋ ಎಂಬಂತೆ ಶಿವಾದ್ವೈತಭಾವದಿಂ
ಮೆರೆದನಾ ತರುಣ ಋಷಿ ಕಾಂತಾರ ಪ್ರಾಂತದಲಿ !

**ಕಶ್ಯಪ**—ಆ ವನದ ತಪೋಧನರೆಲ್ಲ ಧೃತಿಗೆಟ್ಟಿಹೆವು
ಜಪಾನುಷ್ಠಾನಮಿಲ್ಲದೆಯೆ ಕಿತ್ತಡಿಗಳೆಲ್ಲ
ತತ್ತರಿಸಿ ನಿಮ್ಮಡಿಯ ಬಳಿಗೈದಿ ನಿಂತಿಹರು
ನಮಗೊದಗಿರ್ಪ ಉಪಟಳವ ಪರಿಹರಿಸಿ ಕಾಯ್ವುದು
ಗೌರೀಶ ಮಹಲಿಂಗ ದಯಾನಿಧಿ ಶಂಕರನೆ !

ಗೌತಮ—ದೋಷವೇನಿಲ್ಲ ತಾಪಸಿಯಲ್ಲಿ ಭಾವಿಪೊಡೆ
ನಾವೇನು ವೈರಿಗಣವಲ್ಲ ಈರ್ಷ್ಯಾಸೂಯೆ
ಗಳಿಮಗಿಲ್ಲವೆಂದೆಂದು ನವರಾಜರ್ಷಿಯಲಿ
ಎಲ್ಲವನು ನೀಬಲ್ಲೆ ಬೇಡುವೆವು ಶಂಕರನೆ !
ಕಳಿಸು ನವತರುಣ ಮುನಿಯನು ಬೇರೆಡೆಗೆ ನೀಂ
ಪರಿಹರಿಸು ಎಮ್ಮೊಡಲ ಬೇಗೆಯನು ಕರುಣದಿಂ
ಅಂತಾಗದೊಡೆ ನೀಂ ತೋರುವುದು ಕೃಪೆಗೈದು
ಬೇರೊಂದು ಗಿರಿವನದ ಬಳಿಯಲ್ಲಿ ಚಿರತಪೋ
ಭೂಮಿಯನು ಯೋಗಿಜನ ಹೃದಯಾಬ್ಜ ಭಾಸ್ಕರನೇ !

ಶಿವ—(ಮುಗುಳ್ನಗೆಯಿಂದ)
ಅರಿತಾಯ್ತು ನಿಮ್ಮ ಬಿನ್ನಪವ ಮುನಿಪೋತ್ತಮರೆ !
ಶಾಂತಿಯಿಂದಿರಿ ಚಿಂತೆಯೇತಕೆ ತಪೋಧನರೆ ?
ಆ ನೂತನ ಮುನಿಯಾರೆಂಬ ಸಂಶಯವೇಕೆ ?
ಅವನೇಕೆ ತಪಗೈವನೆಂಬ ಕಾರಣವನರಿಯದಾದಿರಿ
ನಿಮಗೆ ಕಂಟಕವಲ್ಲ ಮುನಿಜನರೆ ಅವನೇನು !

ಜಮದಗ್ನಿ—ಸೋಜಿಗಂ ಸೋಜಿಗಂ ! ಪರಮಾತ್ಮ ಗೌರೀಶ !
ಅವನಾರು ? ಆ ಋಷಿಯ ಕಥೆಯೇನು ? ಎಲ್ಲಿಂದ
ಬಂದಿಹನು ? ಅವನ ತಪದ ಗುರಿಯೇನು ? ತೂಣೀರ
ಚಾಪಖಡ್ಗ ಸಾಯಕ ಕಠಾರಿಗಳೇಕೆ ? ವೇಣ್
ಜಪಮಾಲೆ ಜಟಾಭರಣ ರುದ್ರಾಕ್ಷಿ ಶಿವಮಂತ್ರ
ಭಸ್ಮಲಾಂಛನಗಳೇಕೆ ಕ್ಷಾತ್ರಋಷಿಯಂತೆ ?

ಶಿವ—ಆ ಪುರಾವೃತ್ತಮಂ ನೀವರಿಯುವೊಡೆ ನಿಮಗೆ
ದಿವ್ಯ ಚಕ್ಷುಮಂ ನೀಡುವೆನು ನೋಡುತಿರಿ ಹಿಂದಾದ
ಘಟನೆಗಳ ! ಆ ನವ ಋಷಿಯೇ ಪಾಂಡುಕುಮಾರ
ವಿಕ್ರಮಾರ್ಜುನನೆಂಬುದನು ಮರೆಯದಿರಿ ಮುನಿಗಳೆ !

ಎಲ್ಲರೂ— ತಥಾಸ್ತು : ದಿವ್ಯ ಚಕ್ಷುಬಲದಿಂ ನೋಡುವೆವು
ವಿಖ್ಯಾತ ಫಲ್ಗುಣನ ವರತಪದ ಹಿನ್ನೆಲೆಯ
(ಎಲ್ಲರೂ ದಂಡಪ್ರಣಾಮ ಮಾಡುವರು)

ಶಿವ—(ಅಭಯಹಸ್ತದಿಂದ)
"ಮನೋಭೀಷ್ಟಸಿದ್ಧಿರ್ಭವತುಸದಾ ಯುಷ್ಮಭ್ಯಂ !"
(ತೆರೆ ಬೀಳುವುದು)

## ದೃಶ್ಯ ೫

(ಕಾಮ್ಯಕಾರಣ್ಯ ಪ್ರದೇಶ, ಪಾಂಡವರ ಆಶ್ರಮ, ದ್ರೌಪದಿ ಋಷಿಪುತ್ರಿಯ ವೇಷದಲ್ಲಿ ಆಶ್ರಮದ ಹೂಗಿಡಗಳಿಗೆ ನೀರು ಹಾಕುತ್ತಿರುವಳು. ಧರ್ಮ ರಾಯ ಮುನಿವೇಷದಲ್ಲಿ ದೇವದಾರು ವೃಕ್ಷದ ನೆರಳಿನಲ್ಲಿ ಕುಳಿತು ಜಿಂಕೆಯ ಮರಿಗೆ ಹುಲ್ಲು ತಿನ್ನಿಸುತ್ತಿರುವನು. ಭೀಮಸೇನ ಆಲದಮರದ ನೆರಳಿನಲ್ಲಿ ವ್ಯಾಯಾಮ ಮಾಡುತ್ತಿರುವನು. ನಕುಲ ಸಹದೇವರು ಆಯುಧಗಳನ್ನು ಹರಿತ ಮಾಡುತ್ತಿರುವರು.)

ಧೌಮ್ಯ—(ತೀರ್ಥಪ್ರಸಾದಗಳನ್ನು ಕೊಡಲು ಬರುವನು)
ಧರ್ಮಾಭಿವೃದ್ಧಿರಸ್ತು ; ಸದಾಭ್ಯುದಯ ಮಸ್ತು !
ಸಕಲಸನ್ಮಂಗಳಾನಿಭವಂತು ಯುಷ್ಮಭ್ಯಂ !
(ರಾಜಾಶೀರ್ವಾದ)

ಧರ್ಮರಾಜ—ರಾಜಕೋಶಗಳಿಲ್ಲ ವಂದಿಮಾಗಧರಿಲ್ಲ
ಸಾಮಂತನೃಪರಿಲ್ಲ ಚತುರಂಗ ಬಲವಿಲ್ಲ
ವನವಾಸ ಜೀವನದ ಬೇಗೆಯಲಿ ಬಳಲುತಿಹ
ನಮಗೇಕೆ ರಾಜಗೌರವದ ರಾಜಾಶಿಷಃ
ಧೌಮ್ಯರೇ !

ಧೌಮ್ಯ— ವಿಧಿನಿಯಮವಂ ಮೀರಲಾಪುದೇ !
"ಅವಶ್ಯಮನುಭೋಕ್ತವ್ಯಂ ಕೃತಂಕರ್ಮಶುಭಾ
ಶುಭಂ." ಎಂಬಂತೆ ಪೂರ್ವಜನ್ಮದ ಕರ್ಮವನು
ಭೋಗಿಸಲೆಬೇಕು ರಾಜೇಂದ್ರ ! ಚಿಂತಿಸಲೇಕೆ !
ಜಪತಪಾನುಷ್ಠಾನ ಗೋದಾನ ಭೂದಾನ
ವಿದ್ಯಾನ್ನದಾನ ಕನ್ಯಾದಾನ ಆರ್ತಜನ
ಸಂರಕ್ಷಣಾದಿ ಸತ್ಕಾರ್ಯ ತಪವೆಸುಗುತ
ವೇದ ಗೋಬ್ರಾಹ್ಮಣ ದೀನದಲಿತರ ಸೇವೆ
ವೇದಪಾರಾಯಣ ಪುರಾಣ ಶಾಸ್ತ್ರಪರಿಚಯ

ಸಾಧುಜನ ಸಂಸರ್ಗ ಸತ್ಪುರುಷ ಸಹವಾಸ
ತೀರ್ಥಯಾತ್ರಾದಿ ಪುಣ್ಯಕಾರ್ಯಾಚರಣೆಯಿಂ
ಪೂರ್ವಕರ್ಮದ ಬಲವಳಿದು ದೈವಕೃಪೆಯುಕ್ಕಿ
ಶ್ರೇಯೋಭಿವೃದ್ಧಿರಕ್ಕು ನಿಮಗೆಲ್ಲ ಇಹದಲ್ಲಿ !

ಧರ್ಮರಾಜ—ಲೇಸನಾಡಿದಿರಿ ಧೌಮ್ಯಮುನಿವರರೆ ! ಸಹಜಂ !
ಮನಕೆನಿತೊ ಸುಖಮಾಯ್ತು ; ನಿಮ್ಮ ಹಿತವಚನದಿಂ !
ದ್ವಾರಕಾನಾಥ ಶ್ರೀಕೃಷ್ಣನಂ ಭಜಿಸುವೆವು
ಹಗಲಿರುಳು ; ಸೋದರ ಚತುಷ್ಟಯ ಬಲದಿಂದ
ಸಾಧಿಸುವೆ ಪಾಂಡುನೃಪ ಸಾಮ್ರಾಜ್ಯಲಕ್ಷ್ಮಿಯಂ
ಸತ್ಯಪಥದಲ್ಲಿ ಕೌರವರ ಜಯಿಸುವೆವು ಶಿವನಾಣೆ !

ಧೌಮ್ಯ—ಮರೆಯದಿರು 'ಧೈರ್ಯಂ ಸರ್ವತ್ರಸಾಧನಂ' ಎಂಬ
ಉಕ್ತಿಯನು 'ಧರ್ಮೋರಕ್ಷತಿರಕ್ಷತಃ' ಎಂಬ
ಋಷಿವಾಣಿ ನೆನಪಿರಲಿ ; ಶ್ರೀಕೃಷ್ಣ ಪರಮಾತ್ಮ
ಕಾಯುವನು ಪಾಂಡವರ ಬೆಂಬಿಡದೆ ಕಷ್ಟದಲಿ.
ಬಂದುದೆಲ್ಲವು ಬರಲಿ ಗೋವಿಂದ ಕರುಣಿಸಲಿ
'ಸತ್ಯಮೇವಜಯತೇ ನಾನೃತಂ' ! ಧರ್ಮಜನೆ !

ದ್ರೌಪದಿ—ದ್ಯೂತದಲಿ ಸಾಮ್ರಾಜ್ಯಮಂ ಸೋತು ಕೌರವನ
ಸಭೆಯಲ್ಲಿ ಭೀಷ್ಮದ್ರೋಣ ವಿದುರ ಕೃಪಾಚಾರ್ಯ
ಶಲ್ಯಶಕುನಿ ಕರ್ಣರು ಸಾಮಂತ ನರಪತಿ
ವೃಂದ ಬಂಧು ಬಾಂಧವ ಶ್ರೇಣಿ ನೋಣ್ ನೀವಿರಲು
ಕುಲದ್ರೋಹಿ ಮದಾಂಧ ದುರ್ಮಾರ್ಗಿ ಪಾಪಿಷ್ಠ
ದುಶ್ಯಾಸನಂ ಬಂದು ಮಾಸಿಕದ ವೈಲಿಗೆಯು
ಲಿರ್ದೆನ್ನ ಮುಡಿಯು ಹಿಡಿದೆಳದಾಡಿ ಕಾಡಿದನು
ದೂಡಿದನು ; ಚೀರಿದರು ಬಿಡಲಿಲ್ಲ ಪಾಪಾತ್ಮ !
ಉಟ್ಟ ಸೀರೆಯು ಸೆಳೆದು ಗಹಗಹಿಸಿ ನಗುನಗುತ
ಚೆಲ್ಲಾಟವಾಡುತಿರೆ ಮೌನದಿಂ ತಲೆವಾಗಿ

ಷಂಡರಂತಿರ್ದವರು ಮಹಾ ಧರ್ಮವೀರರು
ಪಂಚಪಾಂಡವರೆಂಬುದು ಲೋಕ ಮರೆತಿಲ್ಲ
ಆರ್ತೆಯನು ಅಬಲೆಯನು ರಕ್ಷಿಸಲು ಹೊತ್ತೇನು
ಬಂದಿತ್ತು ನಿಮಗಂದು ! (ಧರ್ಮಜನಕಡೆ ತಿರುಗಿ)
ನಿನ್ನಾಜ್ಞೆಯಂ ಮೀರ
ಲಳವುಂಟೆ ನಿನ್ನ ತಮ್ಮಂದಿರು ಪರಮಭಕ್ತರು !
ಶೂರ ಕುಲಭೂಷಣರು ! ವೈರಿಬಲ ಕಾಲಾಗ್ನಿ
ರುದ್ರರು ! ಮರೆತಿರಾ ಕಷ್ಟದಲಿ ಸಿಲುಕಿರ್ದ ನಿಮ್ಮ
ಈ ಮಡದಿಯನು ! ಪಂಚಪಾಡವ ಸಹೋದರರ
ಪತ್ನಿ ಪಾಂಚಾಲೆಯನು ! ನಿಮ್ಮ ಬಲವೇನಾಯ್ತು !
ಸಾಮ್ರಾಜ್ಯಪದವಿ ಚತುರಂಗ ಸೇನೆಗಳೇಕೆ ?
ಮದದೇಸಿ ಪಾಂಡುಪುತ್ರರಿಗೆ ಸಾಕು ವನವಾಸ

ಧೌಮ್ಯ—ಸ್ಥೈರಣೆಯೆ ಪರಮಸುಖಸೋಪಾನವೆಂಬುದನು
ಮರೆಯದಿರು ಪಾಂಚಾಲೆ ! ಶುಭಮಕ್ಕು ಶುಭಮಕ್ಕು

ಧರ್ಮರಾಜ—ನಿನ್ನ ಕೋಪಾಗ್ನಿ ಸುಡದಿರಲಿ ಧರ್ಮವೃಕ್ಷವನು !
ದುಗಡವೇತಕೆ ಬರಿದೆ ದ್ರೌಪದೀ ? ಪಾಂಡವರು
ಮೀರಲಾರರು ಧರ್ಮವನು ಸ್ವಾರ್ಥದಲಿ ಮೇಣ್
ಸಹಿಸಲಾರರು ಧರ್ಮಲೋಪವನು ಎಂದೆಂದು
ಪುರುಷಸಿಂಹರು ಎನ್ನ ತಮ್ಮದಿರು ; ನಾವೇನು
ಷಂಡಕುಲಸಂಭೂತರಲ್ಲ ದ್ರೋಹಿಗಳಲ್ಲ
ನೆನಪಿರಲಿ ಪಾಂಚಾಲೆ ! ಶತ್ರುಸೈನ್ಯವನು ರಣ
ರಂಗದಲಿ ಸದೆಬಡಿದು ಭೂತಗಣಕೌತಣವ
ನೀಡುವೆವು ಬಿಸಿರಕ್ತದೋಕುಳಿಯನಾಡುವೆವು
ನಂಬು ದೈವವನು ! ಸಾಮಾನ್ಯರೇನಲ್ಲ ಈ
ಪಾಂಡುಪುತ್ರರು ರಣರಂಗ ಪ್ರಳಯ ಭೈರವರು !
ದುಡುಕದಿರು ಕಾಲಾಗ್ನಿ ಪುತ್ರಿ ಧೀರೆ ಪಾಂಚಾಲೆ !

ದ್ರೌಪದಿ—ಎನ್ನ ಬವಣೆಯೆಂತಾದರಾಗಲಿ ಧರ್ಮಜನೆ !
ಚಿಂತೆಯೆನಗಿಲ್ಲ. ಹಸ್ತಿನಾವತಿಯೇನಾಯ್ತು !
ಅರಮನೆಯ ಅಂತಃಪುರದ ಚೆಲುವೆಯರ ಸರಸ
ಸಂಗೋಷ್ಠಿಯೇನಾಯ್ತು ! ಪಾಂಡವರು ಪವಡಿಸಿದ
ಹಂಸತೂಲಿಕಾತಲ್ಪವೇನಾಯ್ತು ! ಬ್ರಾಹ್ಮೀ
ಮುಹೂರ್ತದಲಿ ಪಂಡಿತರು ಘೋಷಿಸಿದ ಮಂಗಳ
ಮಹಾಮಂತ್ರಗಳೆಲ್ಲಿ ! ಉದಯರಾಗಗಳೆಲ್ಲಿ !
ಅನುದಿನವು ನಿಮ್ಮನೆಚ್ಚರಿಸಲು ನಿದ್ರೆಯಿಂ
ಗೂಳಿಡುತಿವೆ ಬಡನರಿಗಳೀ ಕಾಂತಾರದಲಿ
ಗೂಗೆಗಳು ಕೂಗುವುವು ರಾತ್ರಿಯಲಿ ಪಾಂಡವರು
ಪರ್ಣಶಾಲೆಯಲಿ ಹುಲ್ಲು ಹಾಸುಗೆಯಲಿ ಮಲಗು
ತಿಹರೆಂದು ಸೂಚಿಸುತ ಮೃಗ ಪಕ್ಷಿಗಣಕೆಲ್ಲ
ವನರಾಜ ಮುಳುಗಿರಲು ಮಹಾಂಧಕಾರದಲಿ !
ಸುಖೋಷ್ಣ ಸುಗಂಧ ಪರಿಮಳಯುತ ಜಲವಿಲ್ಲ
ಎಲೆವನೆಯ ಮಜ್ಜನದ ಮನೆಯಲ್ಲಿ ; ದಿನದಿನವು
ಕಾಡುಹೊಳೆಯಲ್ಲಿ ಮಿಾಯುವಿರಿ ಹೀನಭಾಗ್ಯರು
ಪಾಂಡು ತನಯರೆಂಬುದನರಿದು ನಾ ಮರುಗುವೆನು !

ಧರ್ಮರಾಜ—ಮುನ್ನಮಾಡಿದ ಕರ್ಮಫಲ ಬೆನ್ನಬಿಡುವುದೇ
ಪಾಂಚಾಲೆ ? ಧರ್ಮವೇ ಜಯವೆಂದು ನಂಬಿಹೆವು
ನಾವೆಲ್ಲ ! ಧರ್ಮಬಲವೇ ನಮ್ಮ ರಕ್ಷಿಪುದು !

ದ್ರೌಪದಿ—ಧರ್ಮತನಯನ ಧರ್ಮವೃಕ್ಷದ ಫಲಗಳೆನಿತೊ !
ಎಣಿಕೆಗಳವಲ್ಲ ! ವಿಧಿಯೆತ್ತ ! ನೀವೆತ್ತ !
ಹೊನ್ನ ಹರಿವಾಣದಲಿ ನೀವೆಲ್ಲ ದಿನದಿನವು
ಷಡ್ರಸೋಪೇತ ಭೋಜನವಗೈದು ನಲಿದಿರಿ
ಹಸ್ತಿನಾಪುರದಲ್ಲಿ ; ಇನ್ನೆಂಟಿ ಆ ಭಾಗ್ಯ !

ಧೌಮ್ಯ—"ಚಕ್ರಾರ ಪಙ್ತ್ತಿರಿವ ಗಚ್ಛತಿ ಭಾಗ್ಯ ಪಙ್ತ್ತಿಃ"
ಎಂದೆಂಬ ತತ್ತ್ವವನು ಮರೆಯದಿಪ್ಪು ಪಾಂಚಾಲೆ !

ದ್ರೌಪದಿ—ಹತಭಾಗ್ಯರೀ ಪಾಂಡವರು ಕಂದಮೂಲಗಳ
ತಿರಿದು ತಂದುಣ್ಣುವರು ಕಾಡಿನಲಿ ಮುತ್ತುಗದ
ಎಲೆಗಳಲಿ ! ಇದಕ್ಕಿಂತ ಇನ್ನೇನು ಮಿಗಿಲುಂಟು
ಲೋಕದಲಿ ಕಷ್ಟಗಳ ಸಾಲಿನಲಿ ಧೌಮ್ಯರೇ !

ಧೌಮ್ಯ—ಜಾತಿಕ್ಷತ್ರಿಯ ಕನ್ಯೆನೀನೆಂಬುದಂ ಬಲ್ಲೆ
ಪಾಂಚಾಲೆ ! ಕಷ್ಟದಲಿ ಪಾಂಡವರ ಸಂತೈಸು
ದುಃಡುಕದಿರು ! ಬೆಟ್ಟದೋಪಾದಿಯಲಿ ಬಂದಿರ್ಪ
ಕಷ್ಟಗಳು ತೊಲಗುವುವು ಎಳೆಬಿಸಿಲು ಪಸರಿಸಲು
ಮಂಜುಮಣಿ ಕರಗುವಂತೆ ಪುಣ್ಯೋದಯದಿಂದ

ದ್ರೌಪದಿ—ಆತ್ಮಪೌರುಷದಿಂದ ವಿಧಿಯ ಮೆಟ್ಟಲು ಬಹುದು
ಹೇಡಿ ಸಾಯುವನು ಸಾವಿನಿದಿರಿನಲಿ ನಿತ್ಯವು
ಶೂರರೊಮ್ಮೆ ಸಾಯ್ವರು ಬಲಿದಾನ ಪೀಠದಲಿ
ಏಸುದಿನ ಬದುಕಿದಸು ಸಾವುದೇ ಖಂಡಿತಂ

ಧೌಮ್ಯ—ಆದೊಡೇಂ ಮರಣಕಾಹ್ವಾನಮುಂಟೆ
ಲೋಕದಲಿ ಜಾಣರಿಂ ಶೂರರಿಂ ಪಾಂಚಾಲೆ !
ಭಾವಿಪೊಡೆ ಶಾಂತಿಯೇ ಸೌಭಾಗ್ಯ ಗಂಗೋತ್ರಿ
ನಿರ್ಮಲಾಕಾಶಾಂಶ ಸಂಭವನು ಧರ್ಮಜನು
ವಾಯುದೇವಾಂಶ ಸಂಜಾತ ಭೀಮಸೇನನು
ತಿಳಿಯೆ ಪಾವನ ಜಲಾಂಶ ತನಯಂ ಫಲ್ಗುಣಂ
ಯಮವಾಯು ದಿವಿಜೇಂದ್ರ ಮಂತ್ರ ಬಲದಿಂದ
ಪಡೆದಳಿವರನು ಕುಂತಿ ಪಾಂಡುರಾಜನ ಪತ್ನಿ
ಭೂತತ್ತ್ವ ಸಂಯುಕ್ತರು ಸಂಜನಿಸಿದರು ವರ
ಮಾದ್ರೀಸುತರು ನಕುಲ ಸಹದೇವ ಸೋದರರು

ಅಶ್ವಿನೀದೇವ ಯುಗ್ಮ ಮಂತ್ರ ಜಪದಿಂದ
ಅನಲಾಂಶ ಸಂಭೂತೆ ನಿನಗುಂಟೆ ಪರಿಭವಂ
ಮುಚ್ಚುವುದೆ ಕರಿಮುಗಿಲು ಭಾಸ್ಕರನ ಕಾಂತಿಯನು !

ಧರ್ಮರಾಯ—"ಕಾಲಾಯ ತಸ್ಮೈನಮಃ" ಎಂಬುದನು ಮರೆಯದಿರು
ಪಾಂಚಾಲೆ ! ದೈವಬಲವನು ನಂಬುವೆನು ನಾನು

ಭೀಮ—ಏನಣ್ಣ ನಮಗೇಕೆ ಸಂನ್ಯಾಸ ಕಾಡಿನಲಿ
ಷಂಡರಾದೆವೆ ! ಪಾಂಡವರ ಶೌರ್ಯ ಬರಡಾಯ್ತೆ !
ಕುರುಕುಲವ ಸಂಹರಿಸಿ ಕೌರವನ ತೊಡೆಮುರಿದು
ದುಶ್ಯಾಸನನ ಕರುಳ ಬಗೆಯುತ್ತ ರಕ್ತದಲಿ
ದ್ರೌಪದಿಯ ಮಂಡೆಯನು ಕಟ್ಟುವೆನು ಬೇಗದಲಿ
ನಿನ್ನಾಜ್ಞೆ ನನಗೇಕೆ ಧರ್ಮ ನಿನಗಿರಲಿ ಬಿಡು
ದ್ರೌಪದಿಯ ದುಃಖವನು ನೀಗುವುದೆ ನಿಜಧರ್ಮ
(ಎಂದು ಹಸ್ತಿನಾವತಿಯತ್ತ ನುಗ್ಗುವನು)

ಅರ್ಜುನ—(ಅಡ್ಡಬಂದು)
ಏನನಾಡಿದೆ ಭೀಮ ! ಧರ್ಮಜನ ಇದಿರಿನಲಿ !
ಸಾಕಿನ್ನು ಸುಮ್ಮನಿರು ಅಗ್ರಜನು ನೊಂದಾಯ್ತು.
ಕುರುವಂಶ ಜಾಲವನು ಅರ್ಜುನನ ಬಾಣಾಗ್ನಿ
ಛಿಟಛಿಟಲುಛಿಟಲೆನುತ ಸುಟ್ಟುರುಹುವುದು ನಾಳೆ
ಸಂಗ್ರಾಮ ಭೂಮಿಯಲಿ ಭೀಮಾರ್ಜುನರು ಕೂಡಿ
ಪುಡಿಗುಟ್ಟುವರು ಕೌರವರ ಸೈನ್ಯವನು ನಕುಲ
ಸಹದೇವರಿರಲು ಬೆನ್ನಿನಲಿ ! ಕೋಪವೇತಕೆ
ಭೀಮ ! ಕಾಲಬಂದಿಲ್ಲವಿನ್ನು ತಡೆ ಸಾಕಿನ್ನು

ಭೀಮ—ಪರಗೃಹದ ಊಟದಲಿ ಬ್ರಾಹ್ಮಣನು ನಲಿವಂತೆ
ಅಚ್ಚ ಹಸುರಿನ ಹುಲ್ಲಿನಲಿ ಗೋವು ತಣಿವಂತೆ
ವರಸತಿಯು ನಿಜಪತಿಯ ಸಂಗದಲಿ ಸುಖಿಸಂತೆ !

ಕೌರವರ ವಂಶವನು ಸಂಹರಿಸಲೆನ್ನ ಮನ
ತವಕಿಪುದು ಪಾರ್ಥ ಈ ಗದಾದುಂಡಾಗ್ರದಿಂ

ಸಹದೇವ—ಲೇಸನಾಡಿದೆ ಅಣ್ಣ ! ಧರ್ಮದೃಷ್ಟಿಯಲಿಂದು
ನಾವಿನ್ನು ಹನ್ನೆರಡು ವರ್ಷದಲಿ ವನವಾಸ
ಮತ್ತೊಂದು ವರ್ಷದಲಿ ಅಜ್ಞಾತವಾಸವನು
ಮುಗಿಸುವುದು ಧರ್ಮಜನ ಕಟ್ಟಾಜ್ಞೆಯೆಂಬುದನು
ಮರೆಯಲಾಪುದೆ ? ಮೀರಿದೊಡೆ ಧರ್ಮಬಾಹಿರರು
ಪಾಂಡವರು ಎಂದೆಂಬ ದುಷ್ಕೀರ್ತಿ ಬರದಿಹುದೆ ?
ಸತ್ಯವೆಂಬುದು ತಾಯಿ ಸುಜ್ಞಾನವೇ ತಂದೆ
ಧರ್ಮವೇ ಸಹೋದರ ದಯೆಯೆ ಮಿತ್ರ ಶಾಂತಿಯೇ
ನಿಜಪತ್ನಿ ಮತ್ತೆ ಕ್ಷಮೆಯೇ ಸುತರೆಂಬುದನು
ಮರೆಯಲಾಪುದೆ ಕಷ್ಟಸುಮನಿಸಲು ಲೋಕದಲಿ

ನಕುಲ—ಸಹದೇವ ಸೋದರನ ಮಾತಿನಲಿ ಛಲವುಂಟು
ಬಲವುಂಟು ನಿಜವುಂಟು ! ಪಾಂಡವರ ಪೌರುಷವು
ಕುಂದಿಲ್ಲ ಕಂದಿಲ್ಲ ; ಕಾಲವಿಲ್ಲದೆ ನಾವು
ದುಡುಕಿದರೆ ಕೌರವನು ಬೆದರುವನೆ ! ಹೆದರುವನೆ !
ಧರ್ಮಜನ ನಿಜಕೀರ್ತಿ ಉಳಿಯುವುದೆ ಲೋಕದಲಿ !

ಭೀಮ—(ಧರ್ಮರಾಜನಿಗೆ ವಂದಿಸುತ್ತ)
ದುಡುಕಿದೆನು ಧರ್ಮಜನೆ ನಾನಿಂದು ! ಎರಗುವೆನು
ದಯಕರಿಸು ; ಪಾಂಡವರು ಹೊಗಲೆಡೆಯಿಹುದೆ ಈ
ಸದ್ಧರ್ಮ ಸಂಕಲ್ಪ ಮಹಾವಜ್ರ ಸಾಮ್ರಾಜ್ಯ
ಪರಿಧಿಯಲಿ ; ದ್ರೌಪದಿಯ ಮನೋವ್ಯಥೆಗಿಂತಲು
ಪಾಂಡುವರ್ಗೆ ಮಾನವೆ ಮಿಗಿಲೆಂದು ಭಾವಿಸೆನು !

ಧರ್ಮರಾಜ—(ಭೀಮನ ಮೈದಡವುತ್ತ)
ಸೋದರರೆ ! ಮೇಣ್ ದ್ರೌಪದಿಯೆ ! ಧರ್ಮದಿಂದಲೆ

ಪಾಂಡವರು ಜಯಿಸುವರು ದುಡುಕಿದರೆ ಅಪಕೀರ್ತಿ
ಮುಸುಕುವುದು ; ಮೆಚ್ಚಲಾರನು ಸತ್ಯಭ್ರಷ್ಟರನು
ಪರಮಾತ್ಮ ಶ್ರೀಕೃಷ್ಣ ! ಶಾಂತಿಯೇ ಸೌಭಾಗ್ಯ !
(ಎಲ್ಲರೂ ತಲೆಬಾಗಿ ವಂದಿಸುವರು)
[ತೆರೆ ಬೀಳುವುದು]

## ದೃಶ್ಯ ೬

[ದ್ವೈತವನ ಪಾಂಡವರ ಪರ್ಣಕುಟೀರ. ಪಾಂಡವರೂ ದ್ರೌಪದಿಯೂ ಅಲ್ಲಲ್ಲಿ ಪರ್ಣಾಸನಗಳ ಮೇಲೆ ಕುಳಿತಿರುವರು: ಶ್ರೀಕೃಷ್ಣನ ಭಾವಚಿತ್ರವನ್ನು ಆಲಂಕರಿಸಿರುವರು]
(ತೆರೆಯಮುಂದೆ)

ಧೌಮ್ಯ—(ಪ್ರವೇಶಿಸುತ್ತ)
[ಸ್ವಗತ]
ಪಾಂಡವರು ನೆಲೆಸಿಹರು ಈ ದ್ವೈತವನದಲ್ಲಿ
ನೆನೆಯುತ್ತ ಶ್ರೀಕೃಷ್ಣ ಪರಮಾತ್ಮ ರೂಪವನು
ಯಾರು ಬಲ್ಲರು ವಿಧಿವಿಲಾಸವನು ಜಗದಲ್ಲಿ !

ಸೌಮ್ಯ—(ಓಡಿಬರುತ್ತ)
ಗುರುದೇವ ಧೌಮ್ಯರೇ ! ಬರುತಿಹರು ನೋಡಿ ಆ
ವೇದವ್ಯಾಸಮಹರ್ಷಿ ವಿಪ್ರಗಣ ಮಧ್ಯದಲಿ !

ಧೌಮ್ಯ—(ತಲೆಯೆತ್ತಿ ನೋಡುತ್ತ)
ಬಾ ! ಸೌಮ್ಯ ! ಅರ್ಘ್ಯಪಾದ್ಯಗಳ ತಂದಿರಿಸಲ್ಲಿ
ಎಲೆವನೆಯ ಅಥಿತಿಗೃಹದಲ್ಲಿ ಮುನಿಗಳಂ ಸ್ವಾ
ಗತಿಸಲ್ಕೆ ಇದಿರ್ಗೊಂಡು ಕರೆತರುವೆ ಋಷಿಗಳಂ !
(ನಿಷ್ಕ್ರಮಣ)

(ತೆರೆ ಏಳುವುದು)

ಪಾಂಡವರು
ದ್ರೌಪದಿ } (ನಿಂತು ನೋಡುತ್ತಿರುವರು)

ಧರ್ಮರಾಜ—ವಂದಿಪೆ ಮುನಿದೇವ ಸುಸ್ವಾಗತಂ ನಿಮಗೆ

ವೇದವ್ಯಾಸ—(ಪ್ರವೇಶಿಸುತ್ತ)
ವನವಾಸ ಕಾಲದಲ್ಲಿ ನೀವಿಲ್ಲಿ ನೆಲಸಿರಲು
ನಮಗಿನಿತು ಸತ್ಕಾರವೇಕೆ ಧರ್ಮನಂದನ !
ದಿನದಿನವು ಭೂಸುರರ ತಣಿಸುತ್ತ ಋಷಿಜನರ
ಸೇವೆಯಲಿ ನೀನಿಂತು ತೊಡಗಿಹುದು ಶ್ರೀಹರಿಯ
ಕೃಪೆಯಲ್ಲದಿನ್ನಿಲ್ಲ ; ಕಾಲಗತಿಯಲಿ ನಿಮ್ಮ
ಕಷ್ಟಗಳು ಹರಿಯುವುವು ಧರ್ಮಬಲವರ್ಧಿಸಲು

ಧರ್ಮರಾಜ—ಧನ್ಯೋಸ್ಮಿಗುರುದೇವ ! ನಮಗಿನ್ನು ಭಯವಿಲ್ಲ
ತಮ್ಮಂಥ ದಿವ್ಯಾತ್ಮ ಮುನಿವರರ ಸೇವೆಯಲಿ
ಪಾಂಡವರು ಕೃತಾರ್ಥರು ವನವಾಸದವಧಿಯಲಿ !
ರಾಜ್ಯಕೋಶಗಳಿಲ್ಲ ಪರಿವಾರ ಬಲವಿಲ್ಲ
ನಮ್ಮ ಸತ್ಕಾರವನೆ ಹಿರಿದೆಂದು ಹೇಳುವಿರಿ
ಪಾವನಾತ್ಮರ ರೀತಿಯನು ಬಣ್ಣಿಸುವರಾರು !

ವೇದ—ಧರ್ಮಜನ ಹೃದಯ ಧರ್ಮ ಮೂಲಂ ಎಂದೆಂದು !

ಧರ್ಮ—ಧನ್ಯೋಸ್ಮಿ ! ಸುಜ್ಞಾನ ಮೂರ್ತಿ ವೇದವ್ಯಾಸ
ಮುನಿವರಂ ಚತುರ್ವೇದ ಹೃದಯಂ ; ಸುಪೂಜ್ಯಂ !
ಗುರುದೇವರೆತ್ತಣಿಂ ಚಿತ್ತೈಸಿದಿರೀಯೆಡೆಗೆ ?

ವೇದ—ತೀರ್ಥಯಾತ್ರಾಪರ್ಯಟನದಲಿ ನಾವಿಂದು
ಬಂದಿಹೆವು ಈ ದ್ವೈತವನ ಋಷ್ಯಾಶ್ರಮದೆಡೆಗೆ
ತೆರಳುವೆವು ಮುಂದೆ ಶ್ರೀ ಬದರಿಕಾಶ್ರಮದತ್ತ !

ಹರ್ಷವಾಂತೆವು ಕಂಡು ಕಾಡಿನಲಿ ನಿಮ್ಮನ್ನು
ದ್ರೌಪದಿಯ ಜೊತೆಯಲ್ಲಿ. ಹಿಂದೆ ಗಜನಗರದರ
ಮನೆಯಲ್ಲಿ ಪೂಜೆಗೊಂಡೆವು ನಾವು. ಜನಿಸಿದರು
ಧೃತರಾಷ್ಟ್ರ ಪಾಂಡು ವಿದುರರು ನಮ್ಮ ಮಂತ್ರೋಪ
ದೇಶದಿಂ ನಾವನ್ಯರಲ್ಲ! ಮರುಗುವೆವು ವನವಾಸ
ವೇಕಾಯ್ತು ನಿಮಗಿಂದು ? ಶ್ರೀಕೃಷ್ಣನರಿಯನೇ ?
ಭೀಷ್ಮ ದ್ರೋಣಗುರುಜನರೊಪ್ಪಿದರೆ ? ಧೃತರಾಷ್ಟ್ರ
ನೇನೆಂದ ? ವಿದುರನಿಲ್ಲವೆ ? ಕುಂತಿಯೆಲ್ಲಿಹಳು ?
ವಿಪಿನದಲಿ ಭೂಸುರರನೆಂತು ತೃಪ್ತಿಬಡಿಸುವಿರಿ ?
ಮೀರದಿರುವರೆ ಸಹೋದರರು ನಿನ್ನಾಜ್ಞೆಯನು ?
ತಿಳಿಸೆಮಗೆ ಧರ್ಮಜನೆ ಹಿಂದಾದ ಕಥೆಯನ್ನು ?

ಧರ್ಮ—ಆಲಿಸಿರಿ, ಮುನಿರಾಯ, ಕೌರವನು ಜಯಿಸಿದನು
ರಾಜ್ಯವನು ಮತ್ತು ಸಕಲೈಶ್ವರ್ಯ ಭಂಡಾರ
ಭಾಗ್ಯವನು ಚತುರಂಗ ಸೈನ್ಯವನು ಲೀಲೆಯಲಿ
ಶಕುನಿಯೊಡ್ಡಿದ ಬಹುಕಪಟ ದ್ಯೂತ ಮುಖದಲಿ.
ಯಾರೇನು ಮಾಡುವರು ! ದುಶ್ಶಾಸನನಂದು
ದ್ರೌಪದಿಯ ಉಟ್ಟ ಸೀರೆಯ ಸೆಳೆಯುತಿರೆ ಸಭೆಯಲಿ
ಶ್ರೀ ಕೃಷ್ಣ ನೀಡಿದನು ಅಕ್ಷಯಾಂಬರಗಳನು
ದ್ರೌಪದಿಯ ಮೊರೆಗೇಳಿ ಮರುಗಿದರು ಜನರೆಲ್ಲ!
ಗುರುಹಿರಿಯರೆದುರಿನೆಲಿ ನಮಗಾಯ್ತು ಪರಿಭವವು

ವೇದ—ಮುಂದಾದ ಪರಿಯೇನು ಧರ್ಮಜನೆ ! ತಿಳಿಸೆಮಗೆ

ಧರ್ಮ—ಸೋತವರು ಹನ್ನೆರಡು ವರ್ಷಗಳ ವನವಾಸ
ಮತ್ತೊಂದು ವರ್ಷದಲಿ ಅಜ್ಞಾತವಾಸವನು
ಮಾಡಬೇಕೆಂದೆಂಬ ನಿಯಮದಲಿ ಬಂದಿಹೆವು
ಇಲ್ಲಿ ಧೌಮ್ಯರುಸಿರಿದ ರೀತಿಯಲಿ ದ್ರೌಪದಿಯು.

ಪ್ರತಿಗೈದು ಭಾಸ್ಕರನ ದಯೆಯಿಂದ ಪಡೆದಾಯ್ತು
ಕನಕದಕ್ಷಯ ಪಾತ್ರೆಯನು ; ಅದರಿಂದ ತಣಿಸುವಳು
ಭೂಸುರರ ಶ್ರೇಣಿಯನು ಮುನಿಗಳನು ದ್ರೌಪದಿಯು
ಭಕ್ತಿಯಲಿ ದಿನದಿನವು ! ನಮಗಿದೇ ಸೌಭಾಗ್ಯ !
ನೀವೆಮ್ಮ ಕುರುಪಾಂಡು ಕುಲಗಳ ಪ್ರಪಿತಾಮಹ
ರೆಂದಾಯ್ತು ! ನಾವನ್ಯರಲ್ಲವೆಂಬಭಿಮಾನ
ಮೂಡಿದುದು ನಿಮ್ಮೊಂದು ದಯದಿಂದ ಆದೊಡೇಂ !
ಮುತ್ತುಗದ ದೊನ್ನೆಯಲಿ ಅರ್ಘ್ಯಾಚಮನ ಪಾದ್ಯ
ಗಳನೀಡಿ ದರ್ಭಾಸನವನಿತ್ತು ತಮಗಿಂದು
ಕಂದಮೂಲಗಳ ಬಡಿಸಬೇಕಾಯ್ತು, ಮನ್ನಿಸಿರಿ

ವೇದ—ನಿತ್ಯತೃಪ್ತರು ನಾವು ರಾಜಭೋಗಗಳೇಕೆ !
ನಮಗಿಂದು ನೀವಿತ್ತ ಪಾವನೋದಕದಿಂದ
ಮುಂದೆ ನಿಮಗಾಗುವುದು ಸಾಮ್ರಾಜ್ಯದಭಿಷೇಕ !
ದರ್ಭಾಸನದಿಂದ ನಿಮಗೆ ಲಭಿಸುವುದು ರತ್ನ
ಸಿಂಹಾಸನು ! ನಿಮ್ಮ ಸತ್ಕಾರ ಬಲದಿಂದ
ಸಿದ್ಧಿಪುವು ಸಾಮ್ರಾಜ್ಯ ಭೋಗಭಾಗ್ಯಗಳೆಲ್ಲ
ಮರುಗದಿರು ಧರಣೀಶ ! ಪರಮೇಶ ರಕ್ಷಿಪನು.

ಧರ್ಮ—ಕಾಮ್ಯಕ ವನವಾಸದಲಿರುತಿರಲು ಕಿರ್ಮ್ಮೀರ
ನೆಂದೆಂಬ ರಾಕ್ಷಸನ ಸದೆಬಡಿದು ಋಷಿಜನರ
ಕಂಟಕವನು ಹರಿಸಿದನು ಭೀಮ ಸಾಹಸದಿಂದ

ವೇದ—ಅಲ್ಲಿಂದ ಮುಂದೇನು ಸಂಗತಿಯು ಧರ್ಮಜನೆ !

ಧರ್ಮ—ಉದ್ಧಟೋದ್ಧಟ ಕೌರವನ ಗರ್ವದಿಂ ನೊಂದು
ಕಡುಮುನಿದ ಮೈತ್ರೇಯ ಶಪಿಸಿದನು ಕೌರವನ
"ನಿನ್ನತೊಡೆಗಳನು ಭೀಮಸೇನನು ಮುರಿಯುವನು"
ಎಂದೆಂಬ ಶಾಪದಿಂ, ಧೃತರಾಷ್ಟ್ರ ಬಳಲಿದನು,

ಇಂತೆಂಬ ವಾರ್ತೆಯನು ಗೂಢಚಾರರಿಂ ತಿಳಿದಾಯ್ತು
ವಿದುರನೈತಂದು ಹಸ್ತಿನಾವತಿಯಿಂ ಮತ್ತೆ
ಪೇಳಿದನು ನಮಗೆಲ್ಲ ರಾಜಧರ್ಮ ಮಾರ್ಗಮಂ
ನೀತಿಯಂ. ಕಡುನೊಂದು ತಿಳಿಸಿದನು ಕೌರವರ
ದೌರ್ಜನ್ಯ ರೀತಿಯನು ಮಹಾಜ್ಞಾತಿವೈರದ
ತಂತ್ರವನು ! ಹರಸಿ ಹೋದನು ನಮ್ಮ ಶುಭವನು.

ವೇದ—ಶ್ರೀ ಕೃಷ್ಣನರಿಯದಾದನೆ ದುರ್ಯೋಧನನ
ಕಪಟವನು ಮುನ್ನಮೇ ವಿದ್ರೋಹದ್ಯೂತವನು ?

ಧರ್ಮ—ಅರಿಯದಾದನು ಕೃಷ್ಣ ಕೌರವನ
ದುಷ್ಟಮಾರ್ಗವನಂದು ವಿಧಿನಿಯಮವೆಂಬಂತೆ
ಅವನಂದು ಇರಲಿಲ್ಲ ನಿಜದ್ವಾರಕಾವತಿ
ಯಲ್ಲಿ ಶಿಶುಪಾಲ ರಾಕ್ಷಸನ ತಮ್ಮ ಶಾಲ್ವನ
ಸೌಭನಗರಿಯಂ ಮುತ್ತಿ ದುರ್ಜನದಾನವರ
ಸದೆಬಡಿದು ಸಮರ ಮುಖದಲಿ ವಿಜಯಯಾತ್ರೆಯಂ
ಗೈದು ಬಹುದೂರ ವಿದ್ದ ಕಾರಣದಿಂದವನು
ಬರಲಿಲ್ಲ ಸಮಯದಲಿ ಕಾಲವಂಚಿಸಿದಂತೆ !

ವೇದ—ಸಿರಿಬಂದಕಾಲದಲಿ ಸೈರಣೆಯು, ಕಷ್ಟದಲಿ
ಗಿರಿಧೈರ್ಯ, ಕೀರ್ತಿಯಲಿ ಕುಂದದಾಸೆಯು, ಶಾಸ್ತ್ರ
ದೊಳು ಪ್ರೀತಿ, ಸಂಗ್ರಾಮದಲಿ ಶೌರ್ಯ, ಸಭೆಯಲಿ
ವಾಕ್ಪಟುತೆ, ಧರ್ಮದಲಿ ನಿತ್ಯಾಭಿಮಾನ, ವರ
ವಿದ್ಯಾರ್ಜನೆಯಲಿ ನಿಷ್ಠೆ, ಮೇಣ್ ಜ್ಞಾನಪಥದಲಿ
ಚರಿಸುವುದು—ಈ ಎಂಟು ಗುಣವೃಂದ ಸೌಭಾಗ್ಯ
ಸೋಪಾನವೆಂಬುದನು ಮರೆಯದಿರು ಧರ್ಮಜನೆ !
ನಾವಿಂದು ಪಾರ್ಥಂಗೆ ಮಂತ್ರೋಪದೇಶವಂ
ಮಾಡುವೆವು ಏಕಾಂತ ಧ್ಯಾನಮಂದಿರದಲ್ಲಿ

ಆ ಮಹಾ ಶಿವಮಂತ್ರ ಬಲದಿಂದ ಫಲ್ಗುಣನು
ತಪಗೈದು ಮಹೇಂದ್ರಕೀಲಗಿರಿ ಧಾಮದಲಿ
ಶಿವನ ಮೆಚ್ಚಿಸಿ ಪಾಶುಪತಾಸ್ತ್ರವನು ಪಡೆದು
ಪಾರ್ವತಿಯ ಕರುಣದಲಿ ಅಂಜನಾಸ್ತ್ರವ ಹೊಂದಿ
ಬರುವನು ಮುಂದೆ ರಣದಲಿ ಕೌರವರಗಡಣ
ದಲಿ ಪ್ರಳಯರುದ್ರನ ತೆರದಿ ಕಾದುವನು ದಿವಿಜರು
ಉಘೆ ಉಘೇ ಎನುತಿರಲು ಶ್ರೀ ಕೃಷ್ಣ ಸಾರಥ್ಯ
ಒದಗಿರಲು ಹಗೆಗಳಳಿವರು ದ್ರುಪದನಂದನೆಯ
ಸೌಭಾಗ್ಯವರ್ಧಿಪುದು ಶುಭಮಸ್ತು ಶುಭಮಸ್ತು !

ಧರ್ಮ—(ಪಾಂಡವರು ದೀರ್ಘದಂಡ ನಮಸ್ಕಾರ ಮಾಡುವರು)
ಧನ್ಯರಾದೆವು ದೇವ ! ಸಾಷ್ಟಾಂಗ ವಂದನೆಯು !

ವೇದ—(ಅಭಯಹಸ್ತದಿಂದ)
ಧರ್ಮಾಭಿವೃದ್ಧಿರಸ್ತು ! ಶುಭ ಮಂಗಳಮಸ್ತು !

(ತೆರೆ ಬೀಳುವುದು)

## ದ್ವಿತೀಯಾಂಕ

## ದೃಶ್ಯ ೧

[ಪಾಂಡವರ ಪರ್ಣಕುಟೀರ. ಅರ್ಜುನನು ಇಂದ್ರಕೀಲದತ್ತ ಹೊರಡಲು ಸಿದ್ಧನಾಗಿರುವನು. ಪಾಂಡವರೂ ದ್ರೌಪದಿಯೂ ಅವನನ್ನು ಬೀಳ್ಕೊಡಲು ನಿಂತಿರುವರು.]

(ತೆರೆಯ ಮುಂದೆ)

ಸೌಮ್ಯ—(ಪ್ರವೇಶಿಸಿ)

[ಸ್ವಗತ]

ಬ್ರಹ್ಮಚರ್ಯದ ನಿಯಮದಿಂದೇನು ಸಿದ್ಧಿಪುದು
ಏನು ಓದಿದರೇನು ಏನು ಹಾಡಿದರೇನು
ಸುಖವುಂಟೆ ಬಾಳಿನಲಿ ? ನನಗೇಕೆ ನಾಕಸುಖ
ಧೌಮ್ಯರಾಜ್ಞೆಯ ಪಡೆದು ತೆರಳುವೆನು ನಾಳೆನಾಂ !
ಪಾರ್ಥನೊಂದಿಗೆ ಮಹೇಂದ್ರಕೀಲ ಪರ್ವತಕೆ !
ಋಷ್ಯಾಶ್ರಮಗಳಲ್ಲಿ ವರಿಸುವೆನು ಅನುರೂಪ
ಕನ್ಯೆಯನು ! ಸುಖಿಸುವೆನು ಸೌಂದರ್ಯ ಲೀಲೆಯಲಿ

(ಮುಂದೆ ನೋಡಿ)

ದೇವ ವೇದವ್ಯಾಸ ಮುನಿವರರ ಬೀಳ್ಕೊಡಲು
ತೆರಳಿದ್ದ ಧೌಮ್ಯ ಮುನಿ ಬರುತಿಹರು ವೇಗದಲಿ.

(ಹತ್ತಿರ ಬಂದಮೇಲೆ)

ನಮಸ್ತುಭ್ಯಂ ದೇವ !ಪಯಣವದು ಸೊಗವಿತ್ತೆ ?

ಧೌಮ್ಯ—ಕಲ್ಯಾಣಮಸ್ತು ಸೌಮ್ಯ ! ಪಾಂಡವರು ಕುಶಲವೆ ?

ಸೌಮ್ಯ—ಪಾಂಡುಪುತ್ರರು ಕ್ಷೇಮದಿಂದಿಹರು ಗುರವೇ !
ನಾಳೆ ಫಲ್ಗುಣನು ತೆರಳುವನು ಸುರೇಂದ್ರ ಕೀಲಕೆ !

ಧೌಮ್ಯ—ತಥಾಸ್ತು ! ನಾವಿನ್ನು ತೆರಳ್ಳೋಣ ಶೀಘ್ರದಲಿ !

(ನಿಷ್ಕ್ರಮಣ)

(ತೆರೆ ಏಳುವುದು)

(ಧೌಮ್ಯ ಸೌಮ್ಯ ಪ್ರವೇಶಿಸುವರು)

ಎಲ್ಲರೂ—ವಂದಿಪೆವು ಗುರುದೇವ !

ಧೌಮ್ಯ— ಶುಭಮಸ್ತು ಸಕಲರ್ಗೆ !

ಅರ್ಜುನ—ಸೋದರರೆ ! ದ್ರೌಪದಿಯೆ ! ಗುರುದೇವ ! ನಾನಿಂದು
ತೆರಳುವೆನು, ದೇವ ವೇದವ್ಯಾಸಮುನಿವರರು
ಬೋಧಿಸಿದ ಮಹಾಶಿವಮಂತ್ರ ಬಲದಿಂದ
ಕಾಡಿನಲಿ ತಪಗೈದು ಸಿದ್ಧಿಯಂ ಪಡೆಯುವೆನು
ಗುರುಜನರ ಆಶಿಷವೆ ಮಹಾರಕ್ಷೆಯಾಗಿರೆ
ಶಿವನ ಸಂದರ್ಶನಂ ಲಭಿಸುವುದು ಶೀಘ್ರದಲಿ !

ಧರ್ಮ—ಆ ಮಂತ್ರ ವಿರೋಧಿಬಲ ಪ್ರಭಂಜನಂ ಸಕಲ
ಪುರುಷಾರ್ಥ ಸಾಧನಂ ಮಹಾಧಿವ್ಯಾಕುಲ
ನಿರ್ಮೂಲಂ. ನೆನಪಿರಲಿ ಹೋಗಿ ಬಾ ! ಕಲಿಪಾರ್ಥ !
ಮನದಲ್ಲಿ ಬೇರೊಂದ ಬಯಸದಿರು ಶಂಭು ಕೃಪೆ
ಗೈಯ್ಯುವಂ ಚಿತ್ತಶಾಂತಿಯಲಿ ತಪವನೆಸಗಲು
ಇಂದ್ರಕೀಲ ಗಿರಿಯಲಿ ಮಹೇಶ ಕ್ಷೇತ್ರದಲಿ !

ಭೀಮ—ಅಲ್ಲಿ ಭಜಿಸುವುದಮಳ ಪಾರ್ವತೀ ಕಾಂತನಂ
ಆಮ್ನಾಯ ವೃಂದ ದುರ್ಲಭನಂ ಮಹಾದಯಾ
ನಿಧಿಯಂ ಪರಮ ಮಂಗಳಕರದಧಿದೈವನಂ
ಬ್ರಹ್ಮೇಂದ್ರ ಭಾಸ್ಕರದಿವಿಜಕೋಟಿ ತತಿಗಿಂತ
ಭಕ್ತರೇ ಬಲ್ಲಿದರು ತನಗೆಂಬ ಬೋಳೆಯರ
ನಾಥನಂ ! ಶುಭಮಕ್ಕು ಹೋಗಿಬಾ ಫಲ್ಗುಣನೆ !

ನಕುಲ—ನನಗಾಗಿ ಚಿಂತೆಯನು ಮಾಡದಿರು ಧನಂಜಯ
ಶಿವನೊಲುಮೆ ಲಭಿಸುವುದು ಪುರುಷಾರ್ಥ ಸಿದ್ಧಿಪುದು.

ಸಹದೇವ—ಮುಗ್ಗದಿರು ಮಾಯೆಯಲಿ ನೆಗ್ಗದಿರು ಲೋಭದಲಿ
ಮೆರೆಯದಿರು ಹಿಗ್ಗಿನಲಿ ನೆರೆಯದಿರು ಪ್ರದ್ಯುಮ್ನ
ಕೇಳಿಯಲಿ ಮರೆಯದಿರು ಕಾಮವೈರಿಯ ಚರಣ
ಕಮಲವನು ಸೋಲದಿರು ಹೊಗಳಿಕೆಯ ಮಾತಿನಲಿ
ಮಾಡದಿರು ಮೋಸವನು ಆಡದಿರು ಅನೃತವನು
ಮಾತಾಡದಿರು ನಾಸ್ತಿಕರಲಿ ಬೆರೆಯದಿರು ಪರ
ವಧುವಿನಲಿ ಸೇರದಿರು ವಿಶ್ವಾಸಘಾತುಕರ
ರಣಹೇಡಿಯಾಗದಿರು ಸಮರದಲಿ ಶಿವಯೋಗ
ಬಲದಿಂದ ಸಿದ್ಧಿಸಲಿ ಮನೋರಥ ಕಲಿಪಾರ್ಥ !

ದ್ರೌಪದಿ—ನೆನೆಯುತಿರು ಮಹಾಜ್ಞಾನಿ ವೇದವ್ಯಾಸಮುನಿ
ವರನಿತ್ತ ಉಪದೇಶಮಂತ್ರವನು ನೆನೆಯದಿರು
ಸಂಸಾರಸೌಖ್ಯವನು ಬಿಡಬೇಡ ನೇಮವನು
ಬೆದರದಿರು ಬಲುತಪಕೆ ಶಂಕರನ ಪದಯುಗವ
ಮರೆಯದಿರು ಶ್ರೀಕೃಷ್ಣನೆಂದೆಂದು ಮೂಡಿರಲಿ
ಹೃದಯದಲಿ ಮುನಿವ್ರತಾಚಾರಣೆಯಲಿ ಸದಾ ನರ
ನಾರಾಯಣರೊಂದೆಂಬ ಭಾವವಳಿಯದಿರಲಿ
ಕರುಣಿಸಲಿ ಕಾಮಾರಿಕೃಪೆಯಿಂದ ಪಾಶುಪತ
ಮಹಾಸ್ತ್ರವನು ದೇವೇಂದ್ರ ಭಾಸ್ಕರ ಯಮವರುಣ
ಹುತಾಶನ ನಿಋತಿ ವಾಯು ಕುಬೇರ ಈಶಾನ
ಹಿಮಕರರು ಸುರವೃಂದ ವಿದ್ಯಾಧರ ಸಿದ್ಧರು
ಮಹೋರಗ ಯಕ್ಷಬಲ ಕಿಂಪುರುಷ ಕಿನ್ನರರು
ನಿನಗೀಯಲಿ ಸಕಲ ಮಹಾಸಿದ್ಧಿ ವೃದ್ಧಿಯನು
(ಎಂದು ಕಾಲಿಗೆರಗುವಳು)

ಅರ್ಜುನ—ಏಳು ನೀ ಪಾಂಚಾಲೆ ! ಸುಖಿಯಾಗು ನೆನೆಯದಿರು
ಪರಿಭವವ ! ಭಜಿಸುವೆನು ದೂರ್ಜಟಿಯ ಚರಣಗಳ

ತಪೋನಿಷ್ಠೆಯಲಿ ಪಡೆದುಬರುವೆನು ಪಾಶುಪತ
ದಿವ್ಯಾಸ್ತ್ರವನು ಮತ್ತೆ ಪರಿಪರಿಯ ಮಂತ್ರಾಸ್ತ್ರ
ಜಾಲವನು ಸುರರೆಲ್ಲ ಮೆಚ್ಚುತಿರೆ ಶೀಘ್ರದಲಿ
ಕೈಲಾಸಸೀಮೆಯಲಿ ಮಹೇಂದ್ರಕೀಲದಲಿ.

(ನಿಷ್ಕ್ರಮಣ)

ಧೌಮ್ಯ—ಶುಭಮಸ್ತು ! ಸರ್ವಾರ್ಥಸಿದ್ಧಿರಸ್ತು ಧನಂಜಯ

(ತೆರೆ ಬೀಳುವುದು)

## ದೃಶ್ಯ ೨

[ಪುಷ್ಪರಥನೆಂಬ ಗಂಧರ್ವ ತನ್ನ ಮಿತ್ರ ಚಿತ್ರಚೂಡನೊಂದಿಗೆ ಇಂದ್ರಕೀಲ ತಪೋವನದಲ್ಲಿ ದೇವಲೋಕದಿಂದ ಇಳಿಯುತ್ತಾನೆ.]

(ತೆರೆಯ ಮುಂದೆ)

ಪುಷ್ಪರಥ—(ಪ್ರವೇಶಿಸಿ-ಸುತ್ತಲೂ ನೋಡುತ್ತ)
ನೋಡಲ್ಲಿ ಚಿತ್ರಚೂಡ ! ಕಾಣುತಿದೆ ತಪೋವನ !
ದಾಂಟಿದೆವು ಸುರಲೋಕ ಸೀಮೆಯನು ಹಿಮಗಿರಿಯ
ತಪ್ಪಲನು ; ಇಳಿದಾಯ್ತು ಭೂಲೋಕ ಋಷಿವೃಂದ
ವಿಹಾರಮೆನಿಸಿರ್ಪ ಮಹೇಂದ್ರಕೀಲದೆಡೆಯಲಿ !
ಮುನಿಜನರ ಪುಣ್ಯ ಪರ್ಣಕುಟೀರದ ಶ್ರೇಣಿಯಲಿ
ನಿತ್ಯ ಹೋಮಧೂಮದ ಕಂಪಿನಲಿ ನಲಿಯುತಿವೆ
ಗೋಹರಿಣ ವೃಂದಗಳು ಚಿಗುರು ಗರಿಕೆಯ ಮೇದು
ಮೈತುಂಬಿ ನೆಗೆದಾಡುತಿವೆ ತಪೋಭೂಮಿಯಲಿ
ವೇದಮಂತ್ರದ ಘೋಷಣೆಯ ಕೇಳಿ ಕೇಳಿ ವನ
ತರುಗಳೆಲ್ಲ ಕಾಣುತಿವೆ ಪರಮಸ್ಥಿತಪ್ರಜ್ಞನ
ರೂಪದಲಿ ತಂಗಾಳಿ ಸುಳಿಯುತಿರೆ ತನಿಗಂಪು

ಬೀರುತಿರೆ ಪ್ರಶಾಂತ ಮನೋಹರ ಗಂಭೀರ
ಪ್ರಕೃತಿಸೌಂದರ್ಯಲಾಸ್ಯವಾಡುತಿರೆ ಸುಮನೋ
ಭಾವದಲಿ ನಾರುಮಡಿಯುಟ್ಟ ಮುನಿವನಿತೆಯರು
ಬರುತಿಹರು ನೋಡಲ್ಲಿ ನೀರು ತುಂಬಿದ ಬಿದಿರು
ಪಾತ್ರೆಗಳ ಹೊತ್ತು, ಎಳೆಬಿಸಿಲು ಹೊಳೆಯುತಿರೆ, ಗಜ
ಗಮನದಿಂದಾಶ್ರಮದಕಡೆಗೆ ಹೊಳೆಯತ್ತಣಿಂ

ಚಿತ್ರಚೂಡ—ನೋಡಿದೆಯ ಪುಷ್ಪರಥ ಕಾಂತಾರಶಾಂತಿಯನು !
ಅರಗಿಣಿಯ ಮೃದುವಾಣಿ ಕೋಗಿಲೆಯ ಸವಿಗಾನ
ಅಂಚೆಗಳ ಕಲರವವು, ನವಿಲುಗಳ ಜಯನೃತ್ಯ
ದುಂಬಿಗಳ ಝೇಂಕಾರ ಪಾರಿವಾಳದ ಧ್ವನಿಯು
ಬಗೆಗೊಳಿಸುತಿಹವು ವನ ಸುಂದರಿಯ ನವಮಂದ
ಹಾಸವನು ಭಾವಿಸಲು ಎಲ್ಲೆಲ್ಲು ಹರ್ಷದಲಿ

ಪುಷ್ಪರಥ—ಏನು ಪುಣ್ಯಾರಣ್ಯ ! ಎಂಥ ದಿವ್ಯಕ್ಷೇತ್ರ !
ಗಂಧರ್ವಲೋಕದಲಿ ನಾಂ ಕಾಣೆನೀ ಭವ್ಯ
ಸೌಂದರ್ಯ ರಾಶಿಯನು ಶುಭೋದಯಧಾಮವನು !

ಚಿತ್ರ—ಅಹುದಹುದು ! ಪುಷ್ಪರಥ ನೋಡಲ್ಲಿ ಬಳಿಯಲ್ಲಿ
ಬಿಲ್ವವೃಕ್ಷದಡಿಯಲ್ಲಿ ತರುಣ ಮುನಿಯೊರ್ವ
ದೇವೇಂದ್ರ ತಿಳಿಸಿದಂತೆಯೆ ಕಾಣುತಿಹನಿವಂ
ಸಂದೇಹವಿನಿತಿಲ್ಲ ಇವನೆ ಕಲಿ ಧನಂಜಯನು !
ಅಪ್ಸರೆಯರೇಕೋ ಬರಲಿಲ್ಲವಿನ್ನು ಸಗ್ಗಿಗರ
ಲೋಕದೆಡೆಯಿಂದ ದೇವೇಂದ್ರನಾಣತಿಯಂತೆ

(ತೆರೆಯ ಹಿಂದೆ ಕಿಲಕಿಲನೆ ನಗು—ಝಣಝಣನಿನಾದ ಕೇಳುವುದು)

ಪುಷ್ಪ—ಚಿತ್ರಚೂಡ ! ಆಲಿಸಾಲಿಸು ದೂರದಲಿ ದಿವಿಜ
ಸುಂದರಿಯರೆಲ್ಲ ಕಿಲಕಿಲನೆ ನಗುತಿಹರು

ನಿಂತಿರ್ದು ನೋಡೋಣ ಅದೃಶ್ಯ ಭಾವದಲಿ
ಆ ಚೆಲುವೆಯರ ಸರಸ ಸಲ್ಲಾಪ ನಾಟ್ಯವನು
ಬೆಡಗು ಬಿನ್ನಾಣ ವೈಯಾರವನಪುಗಳ ಪರಿ
ಪರಿಯ ಶೃಂಗಾರ ಲೀಲೆಗಳ ಚೆಲ್ಲಾಟವನು
ಕಲಿಪಾರ್ಥ ತಪದಿಂದ ಚಲಿಸುವನೆ ! ವೀರವ್ರತ
ಭ್ರಷ್ಟನಾಗುವನೆ ! ಈ ಚಪಲೆಯರ ಕುಡಿನೋಟ
ಮುಂಗುರುಳ ಅಲುಗಾಟ ಸಿರಿಗೊರಳ ಸವಿಗಾನ
ತುಂಬುಜೌವನದ ವೈಮಾಟ ಹಾವಭಾವದ
ಕೂಟಗಳು ಮನ್ಮಥನ ಪಂಚಬಾಣಗಳಾಗೆ
ತರುಣ ಫಲ್ಗುಣಮುನಿಯ ತಪೋವ್ರತ ಕೆಡದಿಹುದೆ !

ಚಿತ್ರ—ಹಿಂದೆ ಅಪ್ಸರೆ ಮೇನಕೆಯ ಮಹಾಸೌಂದರ್ಯ
ವಿಲಾಸದಲಿ ವಿಶ್ವಾಮಿತ್ರ ಋಷಿವರನ ಕೋಟಿ
ವರುಷದ ಮಹೋಗ್ರ ತಪವೆಲ್ಲ ತೇಲಿಹೋಯಿತು !
ಈ ದಿವಿಜ ವಿಲಾಸಿನಿಯರ ಹಾವಭಾವದಲಿ
ಋಷ್ಯಶೃಂಗ ಮಹರ್ಷಿ ಮರುಳಾದ ವ್ರತಗೆಟ್ಟು
ಮೋಹದಲಿ ಶೃಂಗಾರ ಕೇಳಿಯಲಿ ! ಇಂತಿರಲು
ತರುಣ ಮುನಿ ಶಿವಭಕ್ತ ಕಿರೀಟಿಯು ಗತಿಯೇನೊ !
ಬ್ರಹ್ಮ ಹರಿಹರರೆಲ್ಲ ಹೆಣ್ಣಿನೆದುರಿನಲಿ ಗತಿ
ಗೆಟ್ಟು ಮತಿಹೀನರೆನಿಸಿದರು ಲೋಕವರಿಯಲು
ಈ ಮೋಹಜಾಲವನು ದೇವೇಂದ್ರ ಬೀಸಿಹನು
ಪಾರ್ಥಮುನಿ ಮೃಗರಾಜನಂ ಹಿಡಿದು ಬಂಧಿಸಲು

ಪುಷ್ಪ—ದೇವೇಂದ್ರ ಹಿಂದೆಂದು ಋಷಿವರರ ಮೆಚ್ಚದೆಯೆ
ಸಾಧಕರ ಚಿತ್ತವನು ಬಗೆಗೆಡಿಸೆ ಹೂಡಿದನು
ನಾರಿಯರ ಶೃಂಗಾರ ಲೀಲಾವಿಲಾಸವನು !
ಇಂದು ದೇವೇಂದ್ರ ತನ್ನ ಕಂದನಲಿ ಕರುಣಿಸಿ
ಅರ್ಜುನನ ಚಿತ್ತದಲಿ ಚಾಪಲ್ಯ ಸುಳಿಯದಿರೆ

ಶಿವಪಥವ ತೋರುವನು ಹರಸುತ್ತ ಹರ್ಷದಲಿ
ತಾನೆ ಧರೆಗಿಳಿದು ಬಂದು ಭೂಸುರವೇಷದಲಿ !

ಚಿತ್ರ—ನೋಡಲ್ಲಿ ಪುಷ್ಪರಥ ! ಕಲಕೀರವಾಣಿಯರು
ಕಾಳಾಹಿವೇಣಿಯರು ಕಲಧೌತ ಗಾತ್ರೆಯರು
ಕಲಭಮದಯಾನೆಯರು ಕುಲಶಕುಚ ಗಾತ್ರೆಯರು
ಮನಸಿಜನರೂಪೆಯರು ಕೌಶಲ್ಯಗಾನೆಯರು
ಕರಿವೈರಿ ಮಧ್ಯೆಯರು ಕಾಮುಕಾಸ್ವಾಧ್ಯೆಯರು
ಕಳಿಕಳಿಪ ಹಾಸೆಯರು ಕರಚರಣ ಭೂಷೆಯರು
ಕಾಮಪರಿತೋಷೆಯರು ಕಠಿಣಕುಚ ಬಾಲೆಯರು
ಶೃಂಗಾರ ಚಕ್ರವ್ಯೂಹದಲಿ ಸುತ್ತುವರು ಮುನಿ
ಪಾರ್ಥನೆದುರಿನಲಿ ಕುಣಿಯುತ್ತ ಮಧುಗಾನ
ವಿನೋದದಲಿ ಕಾಲ್ಗೆಜ್ಜೆ ಘಲ್ಲೆನಲು ತೊಟ್ಟಿರ್ಪ
ಕೈಬಳೆಯು ಗಲಕೆನಲು ಅನುರಾಗ ಮೇಳದಲಿ
ಅಸಮಶರಸಮರ ಸಮಯದಲಿ ಸುಖಭೋಗದಲಿ
ನೈಮರೆತ ತೆರದಲ್ಲಿ ಕಾಂಬುವರು ಭಾವದಲಿ !

ಪುಷ್ಪ—ದೇವಮಂದಾರ ಮಾಲೆಗಳ ತನಿಗಂಪಿನಲಿ
ಅವರುಟ್ಟ ಸೀರೆಗಳ ಸೆರಗು ಬೀಸಿದ ಗಾಳಿ
ಸುಳಿದರೂ ತಪೋಗ್ನಿ ನಂದಿದಂತಿಲ್ಲ ಹೊಸ
ಹರೆಯ ತುಂಬಿದ ಹೆಣ್ಣು ನಿಂತಿರಲು ಮನ್ಮಥನ
ಮಾಯಾಮನೋಹರ ಸುರತಿರಂಗ ಮೂಡುತಿರೆ
ಕಾಮುಕನ ಭಾವದಲಿ ! ಆದರೇಂ ಕಲಿಪಾರ್ಥ
ಚಲಿಸದೆಯೆ ನಿಂತಿಹನು ವೈರಾಗ್ಯವೇ ಮೂರ್ತಿ
ವೆತ್ತಂತೆ ! ಸೋಽಹಂ ಭಾವದಲಿ ಬಿಲ್ವತರು
ಮೂಲದಲಿ ಶಿವ-ಜೀವ ಒಂದಾದರೀತಿಯಲಿ !

ಚಿತ್ರ—ನೋಡಲ್ಲಿ ಪುಷ್ಪರಥ ತಪೋವನ ಭಾಗದಲಿ
ಬಲ್ಮೊಲೆಯ ಬಿಣ್ಮೊಲೆಯ ನುಣ್ಮೊಲೆಯ ಭಾಮೆಯರು

ಅಚ್ಚ ಕಾಡಿಗೆಗಣ್ಣ ಬಲ್ಬೊಗಸೆಗಣ್ಣ ಮಿಗೆ ನಗೆಗಣ್ಣ
ನೀರೆಯರು ತೊಂಡೆವಣ್ದುಟಿಯ ಥಳಥಳಿಪ ಸಸಿ
ಗೆರೆದುಟಿಯ ತಳಿರ್ದುಟಿಯ ರನ್ನದುಟಿಯ ಒಪ್ಪುವ
ರಂಗುದುಟಿಯ ವಾರಿಯರ ಗಡಣದಲಿರುತಿಹರು
ಸುಲಿಪಲ್ಲ ಕೆಂಬಲ್ಲ ರನ್ನವಲ್ಲ ಮೊನೆವಲ್ಲ
ಮುಗುಳ್ವಲ್ಲ ಕುಲಿಶದಂಪತಿವಲ್ಲ ನೀರೆಯರು
ಶೃಂಗಾರ ಧೀರೆಯರು ನಗೆ ಮೊಗದನುಣ್ಮೊಗದ
ಕಡುಚೆಲ್ವ ತಾವರೆ ಮೊಗದ ಮುದ್ದಮೊಗದ ಸಲೆ
ಬಟ್ಟಮೊಗದೆಸೆವ ಸಸಿ ಮೊಗದ ನೆರೆ ಸಂಪೂರ್ಣ
ಕಾಂತೆಯರು ಸಿರಿಗುರುಳ ನಡುಗುರುಳ ನುಣ್ಗುರುಳ
ನಿರಿಗುರುಳ ನಿಲುಗುರುಳ ಕಿರಿಗುರುಳ ಜಾಣೆಯರು
ನವನೀತ ಕೋಮಲೆಯರಲ್ಲಿ ಸುಳಿದಾಡುವರು !

ಪುಷ್ಪ—ಇಲ್ಲಿ ಈ ಕಡೆಯಲ್ಲಿ ನೋಡಲ್ಲಿ ಬಳಿಯಲ್ಲಿ
ಎಳೆಯ ಬಿದಿರಿನ ಬಣ್ಣ ಮೊಳೆಗರಕೆ ಬಣ್ಣ ಹೊಸ
ಪೊಂಬಣ್ಣ ಸುಳಿವಾಳೆಲೆಯ ಬಣ್ಣ ಹೊಚ್ಚಹೊಸ
ಗಜನಿಂಬೆಬಣ್ಣ ಬಾನ್ಬಣ್ಣ ಮೈಯಬಲೆಯರು
ಸಂಪಗೆಯ ಕಂಪು ತಾವರೆಯ ಗಂಪು ನೂತನ
ಕಸ್ತೂರಿಯ ಸುಗಂಪು ಹೊಂಬಾಳೆ ನಿಡುಗಂಪು
ಕರ್ಪೂರ ಗಂಪು ಹೊಸ ಮಲ್ಲಿಗೆಯ ತಿಳಿಗಂಪು
ಸುಯ್ಯೊಳುಣ್ಮುವಾ ಗಜಗಮನೆಯರು ಮೂಲೋಕ
ಮೋಹಿನಿಯರಲ್ಲಿಹರು ಮಹಾರತಿ ರೂಪೆಯರು !

ಚಿತ್ರ—ಊರ್ವಶಿಯು ಇಡುತಿಹಳು ವಿವಿಧ ಪರಿಮಳ ಕುಸುಮ
ಕಿರೀಟವನು ನಗುನಗುತ ಅರ್ಜುನನ ನೆತ್ತಿಯಲಿ
ನವೋದಯ ತಾರುಣ್ಯ ಪರಿಪೂರ್ಣವೋನಕೆಯು
ಕಸ್ತೂರಿ ತಿಲಕವನು ತಿದ್ದುವಳು ಫಲ್ಗುಣನ
ಫಾಲದಲಿ ಕೆಂದುಟಿಯ ಚೆಂದುಳ್ಳವರರಂಭೆ

ತರುಣ ತಪಸಿಯ ಅಧರವನು ಚುಂಬಿಸುವಳು ಅನು
ರಾಗವೂಡಿಸುವಂತೆ ಸುರಕನ್ಯೆ ತಿಲೋತ್ತಮೆ
ನೈಸೋಂಕಿನಲಿ ನಿಂತು ತೊಳೆಯುವಳು ಕಿತ್ತಡಿಯ
ಪಾದಗಳ ದೇವಗಂಗಾ ಜಲದ ಧಾರೆಯಲಿ
ಅಪ್ಸರಾಂಗನೆ ಚತುರೆ ಘೃತಾಚಿಯು ತೊಡೆಯುವಳು
ಸುಗಂಧ ಚಂದನವ ಋಷಿವರನ ಮೈಗೆಲ್ಲ
ಪರಮ ಸುಖದನುಭವವ ಪಡೆವ ಕಾಮಿನಿಯಂತೆ !

ಪುಷ್ಪ—ಏನು ಲಾವಣ್ಯರಾಶಿ ಬೆಳಗುತಿದೆ ಸುತ್ತೆಲ್ಲ
ನೋಡುವಡೆ ದೇವಕನ್ಯೆಯರ ಸವಿಗಾನದಲಿ
ಮೂಕವಾಯಿತು ಕೋಗಿಲೆಯು ಹಂಸೆ
ಚಲಿಸದಾಯಿತು ನಡಗೆಯಲಿ ಎಳೆಯ ಗಿಣಿವಿಂಡು
ಸೋತಾಯ್ತು ಮಾತಿನಲಿ ವನರಾಜಿಗಡಣದಲಿ !
ಹೂವಿನಲಿ ಕಂಪಿಲ್ಲ ಬಿಸಿಲಿನಲಿಸೆಕೆಯಿಲ್ಲ
ಗಾಳಿಯಲಿ ತಂಪಿಲ್ಲ ಹರಿಣಾಕ್ಷದಲಿ ಚಪಲ
ವಿನಿತಿಲ್ಲ ದಿವಿಜಕಾಂತೆಯರಿರಲು ವನದಲ್ಲಿ !

ಚಿತ್ರ—ಏನು ಕಟ್ಟುಗ್ರ ತಪದಲಿಹನು ಕಲಿಧನಂಜಯ !
ನೋಡಲ್ಲಿ ಪುಷ್ಪರಥ ! ದಿವಿಜಕಾಂತೆಯರ ಕುಡಿ
ನೋಟ ಮಂಕಾಯ್ತು ! ಪ್ರಾಯಮದ ಸಲೆ ಬರಡಾಯ್ತು !
ಸೌಂದರ್ಯ ಕಾಂತಿಯೇ ಬೆಂಡಾಯ್ತು ಗೀರ್ವಾಣ
ವನಿತೆಯರಲಿ ! ಸೋತಾಯ್ತು ರತಿಸಮರವಿಲ್ಲದೆಯೆ !
ಹಾರಿದರು ಗಗನ ಪಥದಲಿ ಚಪಲ ನೇತ್ರೆಯರು
ಕಡುನೊಂದು ಮನಸಿನಲಿ ಪರಿಭವವ ಚಿಂತಿಸುತ

ಪುಷ್ಪ—ಸೋಲನರಿಯದ ಚತುರೆಯರು ವೀರಯೋಗಿಯಲಿ
ಮೆಚ್ಚಿದರು ಏಕೈಕ ನಿಷ್ಠೆಯನು ಮೌನದಲಿ !
ಚಿತ್ರ—ನೋಡಲ್ಲಿ ಪೂರ್ವದಿಕ್ಕಿನಲ್ಲಿ ದಿವ್ಯಜ್ಯೋತಿ
ಬೆಳಗುತಿದೆ ಭಾನುಕೋಟಿ ಪ್ರಕಾಶ ಹೊಳೆದಂತೆ !

ದಿವ್ಯತೇಜೋಮಂಡಲವೆ ಧರೆಗಿಳಿದು ಬರುವ
ತೆರನಂತೆ ! ಭೂಗಗನ ಒಂದಾದ ರೀತಿಯಲಿ
ಕಾಣುತಿದೆ ಕಾಂತಿಪಥ ! ದಿವ್ಯಕಾಂತಿಯದೇನೊ !
ಸಗ್ಗದಿಂದಿಳಿದು ಬರುವಂತಿಹುದು ಭಾವಿಸಲು

ಪುಷ್ಪ—(ನೋಡುತ್ತ) ಆಶ್ಚರ್ಯವೇನಿಲ್ಲ ನೋಡಲ್ಲಿ ಕಾಂಬುವುದು
ಐರಾವತದ ಮೇಲೆ ಕುಳಿತಿರುವ ದಿವಿಜೇಂದ್ರ
ಧರಿಸಿಹನು ವಿಜಯ ವಜ್ರದಂಡವನು ಸುರರತ್ನ
ಮುಕುಟಹೊಳೆಯುತಿರೆ ಮಸ್ತಕಾಗ್ರದಲಿ ನಿರ್ಜರ
ದುಂದುಭಿಯು ಮೊಳಗುತಿದೆ ಹೂಮಳೆಯು ಬೀಳುತಿದೆ
ಸುತ್ತೆಲ್ಲ ವಿಷ್ಣುಪಥದಲಿ ನಕ್ಷತ್ರರಾಶಿಯೆ
ಮೂಡಿ ಬಂದಂತೆ ಬ್ರಾಹ್ಮೀ ಮುಹೂರ್ತದಲಿ ದೇವ
ಲೋಕವೇಧರೆಗಿಳಿದು ಬರ್ಪಂತೆ ಹರ್ಷದಲಿ

ಚಿತ್ರ—(ದೃಷ್ಟಿಸಿ)
ಸಂದೇಹ ವೇನಿಲ್ಲ ಪುಷ್ಪರಥ ನೋಡಲ್ಲಿ
ದೇವೇಂದ್ರನೊರ್ವನೇ ತಿರೆಗಿಳಿದು ಬರುತಿಹನು
ಸುರರೆಲ್ಲ ನಿಂತಿರಲು ಗಗನದಲಿ ಪಾರ್ಥನನು
ಪರಿಕಿಸಲು ದೇವೇಂದ್ರ ನಾಂತನು ನಿಮಿಷದಲಿ
ಜಂಗಮನ ರೂಪವನು ಬಿಲ್ವತರು ಮೂಲದಲಿ !

ಪುಷ್ಪ—ನೋಡಿದೆಯ ! ಬರುತಿಹನು ವೃದ್ಧ ಜಂಗಮನಿತ್ತ
ಪಾರ್ಥ ನಿಂತಿರುವೆಡೆಗೆ ! ನಾವೀಗ ಆಯೆಡೆಯ
ಕೋಡುಗಲ್ಲಿನ ಮೇಲೆ ನಿಂತು ನೋಡೋಣ ಬಾ !
ಅದೃಶ್ಯತನು ರೂಪದಲಿ ಪಿತೃ-ಪುತ್ರದರ್ಶನದ
ಸೌಭಾಗ್ಯ ರೇಖಾಸುಚಿತ್ರ ದೃಶ್ಯಜಾಲವನು !

(ತೆರೆಬೀಳುವುದು) (ನಿಷ್ಕ್ರಮಣ)

## ದೃಶ್ಯ ೩

(ಅರ್ಜುನ ತಪೋವನದಲ್ಲಿ ಶಿವನ ಪೂಜೆಯಲ್ಲಿ ನಿರತನಾಗಿರುವನು. ಧನಸ್ಸು ಬತ್ತಳಿಕೆ ಆಯುಧಗಳು ಬಿದ್ದಿರುತ್ತವೆ. ಓಂಕಾರ ಮೊಳಗುತಿದೆ.)

ಜಂಗಮ—(ಪ್ರವೇಶಿಸುತ್ತ)
ಹರಃ ಓಂ ಶಿವಃ ಓಂ ನಮಃ ಸೋಮಾಯ !

(ಸ್ವಗತ)
ಏಕಾಗ್ರ ಚಿತ್ತದಲಿ ತಪಗೈದ ಕಲಿಪಾರ್ಥ
ಶಿವಲಿಂಗ ಪೂಜೆಯನು ಮಾರ್ತಾಂಡ ಮಂಡಲೋ
ದಯಕಾಲದಲಿ ಮುಗಿಸಿ ನೇಮದಲಿ ಒಪ್ಪುವನು
ಶಿವಯೋಗ ರೂಪಾಂತು ಬಂದಂತೆ ಇದಿರಿನಲಿ

ಅರ್ಜುನ—(ಪ್ರವೇಶಿಸುತ್ತ)
ವಂದನೆಯು ಜಂಗಮೋತ್ತಮ ಅತಿಥಿದೇವನಿಗೆ !

ಜಂಗಮ—ಶುಭಮಸ್ತು ! ತಪಃಫಲ ಸಿದ್ಧಿರಸ್ತು ! ಸಾಧಕನೆ :
ನೀನಾರು ? ನಿನಗೇಕೆ ತಪಗೈವಪರಿಚಿಂತೆ ?
ತಾರುಣ್ಯ ತುಂಬಿರಲು ಈ ಘೋರ ವಿಪಿನದಲಿ ?

ಅರ್ಜುನ—ಆ ಮಾತದಂತಿರಲಿ ! ಕುಳ್ಳಿರೀ ಪೀಠದಲಿ.
ವೈಸುಕ್ಕಿ ನಡುಬಗ್ಗಿ ಕಣ್ನೋಟ ತಗ್ಗಿರಲು
ಕಿವಿದೆರೆಯು ಕೇಳದಂತಿರಲು ಕೋಲೂರಿ ಬಲು
ಕೆಮ್ಮುತ್ತ ದಿಸೆಗೆಟ್ಟು ಬಂದಿರುವ ನೀವೆನ್ನ
ಭಾಗದ ಅತಿಥಿ ದೇವರೆಂದೆಂಬೆ ಕರುಣದಲಿ
ರಕ್ಷಿಸೈ ! ಅರ್ಘ್ಯಪಾದ್ಯವನು ಕೊಂಡು ಸಂತಸ
ದಿಂದ ತನಿವಣ್ಗಳ ಮೆದ್ದು ನೀ ಸಂತೃಪ್ತ
ನಾಗುವೊಡೆ ನಾ ಧನ್ಯನಲ್ತೆ ! ಮಮ ಗುರುದೇವ !

ಜಂಗಮ—ಇಷ್ಟಾರ್ಥಸಿದ್ಧಿರಸ್ತು ! ಸಂತುಷ್ಟನಾಗಿಹೆನು !
(ಮತ್ತೆ) ನೀನಾರು ? ನಿನೆಗೇಕೆ ತಪಗೈವ ಪರಿ ಚಿಂತೆ
ತಾರುಣ್ಯ ತುಂಬಿರಲು ; ನೀನೇನು ಕಿತ್ತಡಿಯೊ !
ಬಿಲ್ಲಾಳೊ ! ನಿನ್ನಕರ ಜಪಮಾಲೆಯೆತ್ತ ಪೊಚ್ಚ
ಪೊಸಕೂರಸಿಯೆತ್ತ ! ವಿಭೂತಿ ಭೂಷಿತ ಮಹಾ
ವಿಸ್ಫುರಿತ ಶಿವಾಕ್ಷಮಾಲ್ಯವಪುವೆತ್ತ ಮೇಣ್
ನಿಬದ್ಧನಿಷಂಗ ಚಾಪವಲ್ಲರಿಮಿಸುಪಂಗ
ವೆತ್ತಘನಶಾಂತದುನ್ನತಿಯೆತ್ತ ? ನೋಡಲು
ನಿನ್ನ ಭೀಕರ ವೇಷವೆತ್ತ ! ಈ ವಿಪರೀತ
ವೇಷಧರ ಮುನಿವರನ ನಾನೆಲ್ಲಿಯುಂ ನೋಡಿ
ತಿಳಿದಿಲ್ಲ ! ಈ ತಪಃಫಲ ಸಂದುದೇನಿನಗೆ !

ಅರ್ಜುನ—ಪಾಂಡುತನಯನು ನಾನು ದಾಯಾದಿ ಕೌರವರು
ಕಪಟ ದ್ಯೂತದಲಿ ಜಯಿಸಿದರು ಸಾಮ್ರಾಜ್ಯವನು
ಅಪಮಾನವೆಸಗಿದರು ವನಿತೆ ದ್ರೌಪದಿಯುಟ್ಟ
ಸೀರೆಯ ಸೆಳೆಯೆ ತುಂಬಿದ ರಾಜಸಭೆಯಲಿ ದುರಳ
ದುಶ್ಶಾಸನನಂದು ! ವನವಾಸ ನಮಗಾಯಿತು
ಪಣದಂತೆ ! ದೇವವೇದವ್ಯಾಸ ಬೋಧಿಸಿದ
ಶಿವಮಂತ್ರ ಜಪದಿಂದ ತಪಗೈವೆ ರಿಪುಗಣವ
ಸಂಹರಿಸೆ ಶಿವನಿಂದ ಪಾಶುಪತ ಬಾಣವನು
ಪಡೆಯಲ್ಕೆ ಹರಸೆನ್ನ ಜಂಗಮನೆ ಕೃಪೆಯಿಂದ !

ಜಂಗಮ—ನಿನ್ನ ಸಂಕಲ್ಪ ಸಿದ್ಧಿಸಲಿ ಕಲಿಪಾರ್ಥ ! ಶಿವ
ನೊಲಿದು ಹರ್ಷದಲಿ ಕೊಡಲಿ ಪಾಶುಪತಾಸ್ತ್ರವನು
ತಪಃಫಲ ವರ್ಧಿಸಲಿ ರಾಜ್ಯಾಭಿಷೇಕದಲಿ
ಕೀರ್ತಿ ಬೆಳಗಲಿ ಚಂದ್ರಮಾರ್ತಾಂಡರಿರುವತನಕ !
(ಇಂದ್ರರೂಪದಿಂದ)
ಮೆಚ್ಚಿದೆನು ಕಲಿಪಾರ್ಥ ! ಸಿದ್ಧಿಸಲಿ ಸಂಕಲ್ಪ !
ನಾನು ದೇವೇಂದ್ರ ! ನೀನೆನ್ನವರ ಪುತ್ರ ಪಾರ್ಥ !

ಅರ್ಜುನ—ಇಂದ್ರವರ ಸಂಜಾತ ನಾನೆಂಬುದನು ಬಲ್ಲೆ !
ಧನ್ಯೋಸ್ಮಿ ! ದೇವೇಂದ್ರ !

ಇಂದ್ರ— ಶುಭಮಸ್ತು ಸಿದ್ಧಿರಸ್ತು !
(ಅಂತರ್ಧಾನನಾಗುತ್ತಾನೆ)

(ತೆರೆ ಬೀಳುವುದು)

## ದೃಶ್ಯ ೪

(ತೆರೆಯ ಮುಂದೆ)

ಪುಷ್ಪ—(ಧಾವಿಸುತ್ತ ಪ್ರವೇಶಿಸುವನು)
ಇತ್ತ ಬಾ ! ಇತ್ತ ಬಾ ! ಚಿತ್ರಚೂಡ ! ಆಶ್ಚರ್ಯ !
ನನಗಲ್ಲಿ ದಾರಿ ತಪ್ಪಿತು ಕಮಲ ಸರೋವರ
ದೆಡೆಯಲ್ಲಿ ರಾಜೀವ ಸೌಂದರ್ಯ ಮೋಹದಲಿ
ಬಂಡುಂಬ ಭ್ರಮರ ಗಣ ಹಾಡುತಿರೆ ಮಧುರ ಝೇಂ
ಕಾರದಲಿ ; ನೋಡಲ್ಲಿ ವನಸರೋವರದಲ್ಲಿ
ಕಿರಾತರ ತರುಣಿಗಣ ಜಲ ಕೇಳಿಯಾಡುತಿದೆ

ಚಿತ್ರ—ದಾರಿತಪ್ಪಿದೆಯೆಂದು ಅಲ್ಲೆಲ್ಲ ಹುಡುಕಿದೆನು !
ಹಿಂದೊಮ್ಮೆ ಗಂಧರ್ವರಾಜ ಮೇಘೋದಯನ
ಪರಿವಾರ ವೃಂದದಲಿ ಬಂದಿದ್ದೆ ನಾನಿಲ್ಲಿ
ಪಾರ್ವತಿಯ ಕಲ್ಯಾಣ ಸಮಯದಲಿ ಬಲುಹಿಂದೆ !
ಈ ಪುಣ್ಯವನಕೆ ಶ್ರೀ "ಗೌರೀವಿಹಾರ" ವೆಂ
ದೆಂಬ ಹೆಸರಾಯ್ತು ! ಅಂದಿನಿಂ ಲೋಕತ್ರಯದಲಿ
ಪರಮ ಶಿವಪಾರ್ವತಿಯರ ಮದುವೆ ಮುಗಿದಾಯಿತು
ಏಳನೆಯ ದಿನದಲ್ಲಿ ಓಕುಳಿಯ ನಾಡಿದರು
ಪ್ರಥಮಗಣ ರುದ್ರವನಿತೆಯರು ಸೇರಿ ಹರ್ಷದಲಿ

 

ಈ ಕನುಲ ಸರೋವರದಲ್ಲಿ ಶ್ರೀ ಗಿರಿ ಪುತ್ರಿ
ಕನ್ಯಾಮಣಿ ನಿಂತಿರಲು ಲಜ್ಜೆಯಲಿ ನೀರಿನಲಿ
ಪರಶಿವನು ಚೆಲ್ಲಿದನು ರತ್ನಪಾತ್ರೆಯ ತುಂಬಿ
ಶ್ರೀ ಗಂಧದೋಕುಳಿಯ ನಗನಗುತ ಸತಿಯತ್ತ
ತುಂಬಲಾರಳು ಗೌರಿ ನಾಳೀಕ ಯಂತ್ರವನು
ಎರಚಲಾರಳು ಶಿವನ ಮಹೋತ್ತುಂಗ ಮುಖದಲಿ
ಬಣ್ಣದೋಕುಳಿ ಬೀಳ್ವ ರೀತಿಯಲಿ ಪಾರ್ವತಿಯ
ಮೇಲುದವು ಜಾರಿರಲು ನಡುಗಿದಳು ಶುಭಗಾತ್ರೆ
ಕಣ್ಮುಚ್ಚಿ ಜಗವೆಲ್ಲ ತಲ್ಲಣಿಸೆ ನಿಮಿಷದಲಿ !
ಗಂಗೆ ನೋಡಿದಳಿದನು ಮುಗಿಲಿಂದ ! ಪುಟಹಾರಿ
ಧುಮುಕಿದಳು ವೇಗದಲಿ ಪಾರ್ವತಿಯ ಬಳಿಯಲ್ಲಿ
ಕಾಸಾರ ಮಧ್ಯದಲಿ ಕಲಹಂಸೆ ಬಂದಂತೆ !
ಚಣದಲ್ಲಿ ಅಕ್ಕತಂಗಿಯರೊಂದುಗೂಡಿದರು
ಓಕುಳಿಯ ಕೊಳದಲ್ಲಿ ಎಡಬಿಡದೆ ಎರಚಿದರು
ಪನ್ನೀರು ಶ್ರೀ ಗಂಧದೋಕುಳಿಯ ಶಂಕರಗೆ !
ಆಕಾಶಗಂಗೆ ಸುರಿಸಿದಳು ಕುಂಭದ್ರೋಣ
ವರ್ಷವನು ಅಭಿಷೇಕವೆಂಬಂತೆ ಧೂರ್ಜಟಿಯ
ಶಿರದಲ್ಲಿ ಚಪಲೆಯರು ನಗುತಿರಲು ಕಿಲಕಿಲನೆ !
ಸೂರ್ಯ ಚಂದ್ರಾಗ್ನಿ ನೇತ್ರತ್ರಯ ಮುಚ್ಚಿರಲು ಫಣಿ
ರಾಜನಡುಗಿದನು ಪ್ರಮಥ ತಿಂಥಿಣಿ ತತ್ತರಿಸಿ
ಬೆರಗಾಯ್ತು ! ಹೂಮಳೆಯ ಸುರಿಸಿದರು ಸುರರೆಲ್ಲ !
ಗಂಗೆ ಗೌರಿಯರಂದು ನಡೆದರು ಹೂಬಳ್ಳಿ
ಮರೆಯಲ್ಲಿ ಮುಗುಳ್ನಗೆ ಬೀರುತ್ತ ಶಿವನತ್ತ !

ಪುಷ್ಪ—ನೀನೆ ಧನ್ಯಾತ್ಮ ಚಿತ್ರಚೂಡ ! ಸಂಶಯವಿಲ್ಲ !
ನೋಡಲ್ಲಿ ಶಬರಿಯರು ನೀರಾಟ ಮುಗಿಸಿಹರು
ಶೃಂಗಾರ ಮೇಳದಲಿ ದಟ್ಟೈಸಿ ಸೇರಿಹರು :

ಶಂಕರನು ಗಿರಿಜೆಯೊಂದಿಗೆ ಪ್ರಮಥ ಗಡಣದಲಿ
ಶಬರರೂಪವ ಧರಿಸಿ ಬೇಂಟೆಯಾಡುವ ನೆಪದಿ
ಪಾರ್ಥಂಗೊಲಿದು ವರವನೀಯಲ್ಕೆ ಹರ್ಷದಲಿ
ಇಂದ್ರಕೀಲ ಗಿರಿಯತ್ತ ತೆರಳುವನೆಂದು ನಾ
ನರಿತೆನಲ್ಲಿ ಕಿರಾತನಾಯಕರ ಬಳಗದಲಿ !
ಶಬರ ವೇಷದಲಿ ಬಂದಿಹರು ಪ್ರಮಥರೆಲ್ಲರು
ನಾವಿಲ್ಲಿ ಬಿದಿರುಮೆಳೆಯೆಡೆಯಲ್ಲಿ ನಿಲ್ಲೋಣ !

ಚಿತ್ರ—ನೋಡಿದೆಯ ! ಆ ಬೇಡತಿಯರ ಹೆಗ್ಗಡತಿ ಬಲು
ಠೀವಿಯಿಂ ಬರುತಿಹಳು ಬಾಲೆಯರ ಗಡಣದಲಿ
ಕರಿಯ ಸೀರೆಯನುಟ್ಟು ಕರಿಯ ರವಕೆಯ ತೊಟ್ಟು
ಠೋರುತುರುಬಿನಲಿ ನವಿಲಗರಿಗಳ ಕಟ್ಟಿಹಳು
ಹಸಿರು ಮಣಿಗಳ ಮಾಲೆಯನು ಧರಿಸಿ ಕೊರಳಲ್ಲಿ
ಹುಲಿಯ ಚರ್ಮದ ಪಟ್ಟಿಯನು ಬಿಗಿದು ಸೊಂಟದಲಿ
ಶುಕ್ರ ಮುಕುರವನ್ನಿಟ್ಟಿಹಳು ಮೂಗಿನಲಿ ಹೊಳೆಯೆ
ಬಿಚ್ಚೋಲೆ ಕಿವಿಗಳಲಿ ಮಾಂಗಲ್ಯ ಕಂಠದಲಿ
ಕಾಲಲಂದುಗೆ ಸುತ್ತು ಮಿಂಚುಗಳು ಪಾದದಲಿ
ತೋಳ್ಬಂದಿ ರಟ್ಟೆಯಲಿ ಕಡಗಬಳೆ ಮುಂಗೈಲಿ
ಒಪ್ಪಿರಲು ನೆರೆಕಾಣುವಳು ಬೇಡರುಡುಗೆಯಲಿ !

ಪುಷ್ಪ—ಕಾಡಿಗೆಯ ತಿದ್ದಿಹಳು ಕಣ್ಣುಗಳ ಕುಣಿಕೆಯಲಿ
ಕಸ್ತೂರಿ ತಿಲಕವನು ತಿದ್ದಿಹಳು ಹಣೆಯಲ್ಲಿ
ಮುತ್ತುಗದ ಹೂಗೊಂಚಲನು ಹಿಡಿದು ಬೀಸುವಳು
ತನ್ನೊಡೆಯ ಶಬರ ಶಂಕರದೇವ ಕುಳಿತಿರಲು !
ಆ ಬೇಡರೊಡೆಯನೇ ಕೈಲಾಸ ಶಂಕರನು
ಆ ಹೆಗ್ಗಡತಿಯೆ ಕಾಳಿಪಾರ್ವತೀ ದೇವಿಯರು !
ಆ ಹೊಟ್ಟೆಹೊತ್ತಿರುವ ಶಬರನೇ ಗಣನಾಥ !
ನೂರೊಂದು ಶಬರಗಣ ನಾಯಕನು ಸೈನ್ಯದಲಿ

ಅಲ್ಲಿಹನು ವೇಲಾಯುಧನು ಬಿಲ್ಲುಬಾಣಗಳು
ಬತ್ತಳಿಕೆ ಒಪ್ಪಿರಲು ಹುಟ್ಟುಬೇಡನಂತೆಯೆ
ಕಾಣುವನು ಸಕಲ ಶಬರ ಪ್ರಮಥಗಣ ಚಿತ್ರದಲಿ

ಚಿತ್ರ—ಅಲ್ಲಿಯುನ್ನತ ಕಾಂಚನ ಗಂಗಾ ಶಿಖರದಲಿ
ನಿಂತು ನೋಡೋಣ ಶಬರ ಶಂಕರ ಲೀಲೆಯನು !

ಪುಷ್ಪ—ತಥಾಸ್ತು ! ನಾವಿನ್ನು ತೆರಳೋಣ ಶೀಘ್ರದಲಿ

(ತೆರೆ ಬೀಳುವುದು) (ನಿಷ್ಕ್ರಮಣ)

## ದೃಶ್ಯ ೫

(ಮಹಾರಣ್ಯ ಪ್ರಾಂತ. ಗಿರಿಶ್ರೇಣಿ ಮೃಗಗಳ ಘರ್ಜನೆ)

ದುಷ್ಕಂಡ—(ಶಬರನಾಯಕ) (ಪ್ರವೇಶಿಸಿ)
ಬನ್ನಿರೋ ! ಬನ್ನಿರೋ ! ದುರುದುಂಡ ಕೋದಂಡ
ಉದ್ದಂಡ ಭೂಪಿಂಡ ಗಜದಂಡ ದುರ್ಮುಖರಘು
ಶಂಭಾರಿ ವಕ್ರಾಂತ ದುಸ್ಸಂಗ ದುರ್ನಾಮ
ದುರ್ಮಾಲ ದುರ್ನಾಥ ದುರ್ಗಂಧ ದುರ್ದಂತ
ಕೊಟ್ರಾಯ ಕಟವಪ್ರ ದುರ್ಜತ್ತಿ ದುರ್ದಾನಿ
ಅಲ್ಲೊಂದು ಕರಿಹಂದಿ ನುಗ್ಗುತಿದೆ ಹೂಂಕರಿಸಿ
ಕಾಡುಮರಗಳ ಸಂದಿನಲಿ ಮುಳ್ಳು ಹೊದರುಗಳ
ಒತ್ತಿನಲಿ ಮೃತ್ಯುವೇ ಮೈತಳೆದು ಬಂದಂತೆ !

ಸ್ಸಂಗ—ಕೊರೆದಾಡೆಗಳಿಂದ ಹೆಮ್ಮರವ ಸೀಳುತ್ತ
ದಿಣ್ಣೆಗಳ ಬಗಿಯುತ್ತ ಕಾಡೆಲ್ಲ ನಡುಗುತಿರೆ
ನುಗ್ಗುತಿದೆ ಚಂಡಾಲ ಕೋಪದಲಿ ಸಿಡಿಲಂತೆ !

ಕೊಂಬು ತಮ್ಮಟೆ ಭೇರಿ ತುತ್ತೂರಿ ರಣಕಹಳೆ
ಶಂಖ ಡಮರುಗ ತಾಳ ಹರೆ ಜಾಗಟೆ
ಢಕ್ಕೆ ನಿಸ್ಸಾಳವಾದ್ಯಗಳು ಘೋರ್ಗರೆಯುತಿವೆ

(ಶಬರರು ಓಡೋಡಿ ಬರುತ್ತಾರೆ)

**ದುರ್ನಾಮ**—ಹಾಕಿರೀ ಇಡುವಲೆಯ ಸಿಡಿವಲೆಯ ಕಿರುವಲೆಯ
ನಡೆವಲೆಯ ಪೆರ್ವಲೆಯ ಬೀಸಿರೀ ಕೊಲ್ವಲೆಯ
ಕೊಡುಂಕುವಲೆನಿಡುವಲೆ ಕಕ್ಕಡವಲೆಗಳನಲ್ಲಿ !
ಹಾಸಿರೀ ಸಾಲ್ವಲೆಯ ಬಿಡುವಲೆಯ ಬಳಿಯಲ್ಲಿ

**ದುರ್ಮಾಲ**—ದಾರಿಬಿಡಿ ನಿಲ್ಲಿ ಮಗ್ಗುಲಲಿ ಶಬರಿಗಿರಿಜೆಯ
ಜೊತೆಯಲ್ಲಿ ಬರುತಿಹನು ಕಿರಾತ ಮಹೇಶ್ವರಂ !

ಕಿರಾತರುದ್ರ
ಕಿರಾತ ಗೌರಿ } (ಪ್ರವೇಶಿಸುವರು)—(ಎಲ್ಲರೂ ಜಯಘೋಷ ಮಾಡುವರು)

**ಕಿರಾತರುದ್ರ**—ಬಾ ಶಬರಿ ! ಭಯವೇಕೆ ಕಾನನದ ಮೃಗವೃಂದ
ನಿಂತಲ್ಲಿ ನಿಂತಿಹುದು ಶಬರಿಯರ ತಂಡದಲಿ
ಮಾಕಾಳಿ ಬರುತಿಹಳು ಶಬರಿವೇಷದಲೆಂದು !
ನೀನುಟ್ಟ ತಳಿರುಡೆಯೆ ಸಂಜೆಗೆಂಪಾಗಿರಲು
ನಿನ್ನ ಕೊರಳ ಕುಣಿಸರವೆ ನಕ್ಷತ್ರಮಾಲೆ ನಿಜ
ಕಾಯಕಾಂತಿ ಕಡುಗತ್ತಲೆ ಮೂಕುತಿ ಮುತ್ತು
ಶುಕ್ರ ತಾರೆಯನು ಹೋಲುವುದು ಭಾವಿಸಲು ಗಿರಿಜೆ !
ನಿನ್ನ ಶಬರಿಯ ದಂಡು ಕಾಣುತಿದೆ ಯಮಪಾಶ
ವೆಂಬಂತೆ ಕ್ರೂರಮೃಗ ತಿಂಥಿಣಿಯ ಕಣ್ಣಿನಲಿ !
ಭಿಲ್ಲಾಂಗನೆಯರ ವೇಷದಲಿಹರು ಗೀರ್ವಾಣ
ನಾರಿಯರು ಬೀಸುಬಲೆಗಳ ಹಾಸಿಹಿಡಿಯುವರು
ಪುರುಷ ಮೃಗ ಜಾತಿಯನು ಮೋಹಾಂಧ ವಿಪಿನದಲಿ !

**ಕಿರಾತ ಗೌರಿ**—ಶಿವಶಬರ ಪ್ರಮಥಗಣ ಮೃಗಜಾಲ ಕಾಡಿನಲಿ
ದೆಸೆಗೆಟ್ಟು ದಾರಿ ತಪ್ಪದ ರೀತಿಯಲಿ ನಮ್ಮ ,

ಭಿಲ್ಲೆಯರು ಬೀಸುವರು ಸಣ್ಣಕಣ್ಣಿನ ಬಲೆಯ
ಹಗಲಿರಳು ಕಣ್ಣಲ್ಲಿ ಕಣ್ಣಿಟ್ಟು ಬೇಟೆಯಲಿ !
ಮೋಹ ಜಾಲವ ಹರಿದ ಶಿವಪ್ರಮಥ ಕಿರಾತರು
ನಂದೀಶ ಭೃಂಗೀಶ ದಾರಕನು ರೇಣುಕನು
ಮಹಸತ್ವ ಸಾಂದ್ರರು ಗಣೇಂದ್ರ ಪೂಜ್ಯರು
ನಿಂದಿಹರು ಮುಂಚೂಣಿಯೆಡೆಯಲ್ಲಿ ಸುಪ್ರಸನ್ನ
ಭಾವದಲಿ ದೇವನಡಿದಾವರೆಯ ಬಂಡುಂಬ
ಭ್ರಮರಗಣವೆಂಬಂತೆ ! ನೋಡಲ್ಲಿ ಪರಮಾತ್ಮ !

ಕಿರಾತರುದ್ರ—ಸಿಂಹಶಾರ್ದೂಲ ಗಜವೃಂದ ಮೃಗತತಿಪಕ್ಷಿ
ಗಣವೆಲ್ಲ ಓಡುತಿದೆ ನೋಡಲ್ಲಿ ಬೇಡಪಡೆ
ನುಗ್ಗುತಿದೆ ಗುರಿಯತ್ತ ಬಿಟ್ಟ ಬಾಣಗಳಂತೆ !
ಹೆಮ್ಮರಗಳುರುಳುತಿವೆ ಕೆಂಧೂಳು ಮುಸುಕುತಿದೆ
ವನವೆಲ್ಲ ಹೂಂಕಾರ ನಾದದಿಂ ನಡುಗುತಿರೆ
ಬೆಟ್ಟಗುಡ್ಡಗಳಲ್ಲಿ ಮರುದನಿಯು ಚೀರುತಿದೆ.
ಕಾಳರಕ್ಕಸನಾರೊ ನುಗ್ಗಿಹನು ವನದಲ್ಲಿ
ಸಿಡಿಲ ಗರ್ಜನೆ ಕೇಳುತಿದೆ ನಿಲ್ಲು ! ದೂರದಲಿ !

(ಗಿರಿಜೆ ಶಿವನ ಬೆನ್ನಹಿಂದೆ ಭಯದಿಂದ ನಿಲ್ಲುವಳು)

ನಂದೀಶ—ಭಿಲ್ಲೇಶ ದೇವಿಯರ ಕಾಪಿನಲಿ ಕಾದಿರಲಿ
ಜಂಗಮ ಕಿರಾತಗಣವೀ ದೇವ ಮಂದಾರ
ವೃಕ್ಷದೆಡೆಯಲ್ಲಿ ನಿಂತಿರಲಿ ! ನುಗ್ಗುತ್ತ ಗುಡುಗುತ್ತ
ರಭಸದಲಿ ಮೇಲ್ವಾಯ್ದು ಬಂದಪುದು ನೋಡುತ್ತ
ಉದಗ್ರ ಸೂಕರಂ ಪ್ರಳಯ ಭೈರವ ರೋಷದಲಿ ;
ರುದ್ರಪುಳಿಂದಗಣವೆಲ್ಲ ಭಯದಿಂ ಕಂಗೆಟ್ಟು
ನಿಂತಲ್ಲಿ ನಿಂತಿಹುದು ಬೆರಗಾಗಿ ಬಿಟ್ಟ ಬಾಣಗಳೊಂದು
ನಾಟದಿರೆ ಕಿಟಿಯ ಮೈಯಲ್ಲಿ ಕುಟ್ಟುತಿವಿ ಕೊಲ್ಲು
ಗೋಣ್ಮುರಿ ಸೀಳು ಹೊಯ್ ತರಿ ಪಳಂಚು ನಿಲ್ಲದೆ

ಓಸರಿಸು ಬೀಸುಬೆಳ್ಳಾರವೆಂಬ ಗಜಿಬಿಜಿ
ಪಿರಿದಾಗೆ ಬೇಡರಲಿ ! ತಡೆಯಲಳವಲ್ಲ ಬಲು
ಬಿನ್ನಣದೆ ಬಿದಿರ್ಚಿ ನಿರ್ಭರದೆ ಪೆರ್ಬಲೆಯನದು
ಹರಿದಿಕ್ಕಿ ಕೇಣದಿಂ ಪಾರುತಿರ್ಪುದು ನೋಡು
ದಾರಿಯಲಿ ಕರಾಳ ಮಹಾ ರಾಕ್ಷಸನ ತೆರದಿ !

**ಕಿರಾತರುದ್ರ**—ನಂದೀಶ ಭಯವೇಕೆ ! ನೀನರಿಯೆಯಾ ! ಮೂಕ
ದಾನವನತಿ ಬಲಾಢ್ಯ ನಿಹನಿಲ್ಲಿ ಮಹೇಂದ್ರ
ಕೀಲಗಿರಿ ಗಹ್ವರದಲಿ ಬ್ರಹ್ಮವರ ನಿಜಭಾಗ್ಯದಲಿ !
ಆ ರಾಕ್ಷಸನ ಶಾಪವಿಮೋಚನೆಯಹುದೆನ್ನ
ಬಾಣದಲಿ ನೋಡುತಿರು ! ಅದುವೆ ಕಾರಣದಿಂದ
ಪಾರ್ಥಂಗೊಲಿದು ವರವ ನೀಡುವೆನು ಬೇಗದಲಿ !

**ಕಿರಾತಗೌರಿ**—ಅದೋ ಬಂದಪುದು ! ಕಾಳ ಸೂಕರಂ ಘುಡುಘುಡಿಸಿ
ಪ್ರಳಯ ಮೇಘ ಸದೃಶನಾದದಿಂದಲಿ ಘರ್ಜಿಸುತ
(ಭಯಚಕಿತೆಯಾಗುವಳು)

**ಕಿರಾತರುದ್ರ**—ಹೆದರದಿರು ಹರಿಣಾಕ್ಷಿ ! ಅತ್ರಸರಿ ನಂದೀಶ !
ಅಂಜದಿರಿ ರುದ್ರಕಿರಾತರೆ ! ಹೂಡುವೆನಿದೋ
ಪಿನಾಕ ಧನುವಿನಲಿ ಮಹಾಮೃತ್ಯು ಶಕ್ತಿಯುತ
ಈಶಾನ ಬಾಣವನು ; ರಕ್ಕಸನ ಸೀಳುವೆನು
ನಿಮಿಷದಲಿ ಭಕ್ತರಕ್ಷಣೆಯ ಸಂಕಲ್ಪದಲಿ !
(ಬಾಣ ಪ್ರಯೋಗ ಮಾಡುವನು)
(ತೆರೆಯ ಹಿಂದೆ)

**ದಾನವ**—(ಹಾ ! ಹೋ ! ಹಾ ! ಎಂದು ಅರಚುವನು)

**ನಂದೀಶ**—(ನೋಡಿ)
ಅದ್ಭುತಂ ! ಪರಮಾದ್ಭುತಂ ! ಮೂಕದಾನವಂ
ಕಿರಾತ ರುದ್ರ ಬಾಣಹತಿಯಿಂ ವಜ್ರನಿರ್ಘಾತ

ದಿಂದುರುಳ್ದ ನೀಲಾಚಲದಂತೆ ಬಿದ್ದೆದ್ದು
ಬೇಗದಿಂದೋಡುತಿದೆ ಪಾರ್ಥಋಷಿಯಾಶ್ರಮದ
ಮಾರ್ಗದಲಿ ಕಿತ್ತಡಿಗಳೆದ್ದೋಡುತಿರಲಲ್ಲಿ !

ಕಿರಾತರುದ್ರ—ಅಲ್ಲಿ ನೋಡೈ ನಂದಿ ! ಶಿವಯೋಗಿ ಫಲ್ಗುಣನು
ಯೋಗವನು ಬಿಟ್ಟು ಕಣ್ದೆರೆದು ಮುಂದಿರ್ದ ಕಿಟಿಯ
ನೋಡುತ್ತ ತಪಸ್ವಿಗಳಿಗಿದುಪಹತಿಯೆನುತ್ತ
ನಿಜಕ್ಷಾತ್ರಧರ್ಮದಲಿ ಗಾಂಡೀವವನೆತ್ತಿ
ಹೆದೆಯೇರಿಸಿ ಜೇವೊಡೆದು ಹೂಡಿದನು ಚಣದಲಿ
ಕೂರ್ಗಣೆಯನಮಮ ! ಬಾಣತಾಗಿತು ಸೂಕರಗೆ
ಬಿದ್ದಿತಲ್ಲಿಯೇ ತತ್ತರಿಸಿ ಹೊರಳಾಡಿ ಮೇಣ್
ಅರಚುತ್ತ ಕಾಡೆಲ್ಲ ನಡುಗುತಿರೆ ಗಡಗಡನೆ !

ಕಿರಾತಗೌರಿ—ಅವನೇನೊ ಫಲ್ಗುಣನು ! ಋಷಿಯಂತೆ ತೋರುವನು
ಬಿಲ್ಲುಬಾಣಗಳ ಹಿಡಿದು ಬರುತಿಹನು ವೇಗದಲಿ
ಸೂಕರನು ಬಿದ್ದೆಡೆಗೆ ! ನೀವೇಕೆ ನಿಂತಿಹಿರಿ
ನಮ್ಮದಲ್ಲವೆ ಹಂದಿ ! ಸೋತವರು ನಾವೇನು !
ನಿಮ್ಮ ಶರದಿಂದ ಸತ್ತುದಲ್ಲವೆ ಸೂಕರಂ !

ಕಿರಾತರುದ್ರ—(ನಗುತ್ತ)
ಯಥಾರ್ಥಂ ದೇವಿ ! ತೆರಳೋಣ ಬನ್ನಿರಿ ಹಂದಿ
ಬಿದ್ದಿರುವೆಡೆಗೆ ಆ ಋಷಿ-ಧನಂಜಯಂ ಎಳೆದು
ಕೊಂಡೊಯ್ವ ಮುನ್ನವೇ ! ಮುಂದೆ ನಡೆ ನಂದೀಶ !

ನಂದೀಶ—ಈ ಮಾರ್ಗದಲಿ ಬನ್ನಿ ! ಬಳಸಿಲ್ಲ ಮುಳ್ಳಿಲ್ಲ
ಕಲ್ಲಿಲ್ಲ ! ಕಾಣುತಿದೆ ಸತ್ತಹಂದಿ ಬಳಿಯಲ್ಲಿ !

(ನಿಷ್ಕ್ರಮಣ)

(ತೆರೆಬೀಳುವುದು)

## ದೃಶ್ಯ ೩

(ತೆರೆಯ ಮುಂದೆ)

ಸೌಮ್ಯ—(ಪ್ರವೇಶಿಸಿ)

(ಸ್ವಗತ)

ಬ್ರಹ್ಮಚರ್ಯದಕಾಲ ಸಂಸಾರ ಜೀವನದ
ಮೂಲ ! ಆದರೇಂ ! ಸೌಂದರ್ಯಮಯ ಷೋಡಶಿಯು
ದೊರೆವುದೆಂತು ! ಋಷಿಕನ್ಯೆಯರೆಲ್ಲ ವೇದಾಂತ
ನಿಪುಣೆಯರು ! ನಾನಂತು ಮುನಿವರ್ಯ ಫಲ್ಗುಣನ
ಸೇವೆಯಲಿ ಶ್ರಮಿಸಿದೆನು ಹೆಣ್ಣಿನಾಸೆಯು ಕಾಡು
ತಿಹುದೆನ್ನ ಬೆಂಬಿಡದೆ ಹಗಲಿರಳು ಕಾಡಿನಲಿ !

(ದೃಷ್ಟಿಸಿ ಮುಂದೆ ನೋಡಿ)

(ಪ್ರಕಾಶ)

ಅಲ್ಲಾರೊ ನವಕನ್ಯೆ ಬರುವಂತೆ ತೋರುತಿದೆ !
ಮಹಾಸೌಂದರ್ಯ ತೇಜಃಪುಂಜವೇ ರೂಪು
ಗೊಂಡಂತೆ ಕಾಣುತಿದೆ ನವಮೋಹನಾಂಗಿಯಲಿ !
ಇವಳಾರೊ ! ನೋಡಿದೊಡೆ ಗಿರಿಪುತ್ರಿಯೊ ಸುರಸತಿಯೊ !
ವಸಂತ ಮಹಾಲಕ್ಷ್ಮಿಯೊ ! ನಾನರಿಯಲವಳಲ್ಲ.
ಏಕಾಂಗಿಯಾಗಿಹಳು ಬಂಧುಬಾಂಧವರಿಲ್ಲ
ಜೊತೆಯಲ್ಲಿ ಸಖೀಜನರಿಲ್ಲ ವೀಕಾಡಿನಲಿ !

(ಮರೆಯಾಗಿ ನಿಲ್ಲುವನು)

ಷೋಡಶಿ—(ಹಾಡುತ್ತ ಕುಣಿಯುತ್ತ ಬರುವಳು)

ಏನು ಸೌಂದರ್ಯರಾಶಿ ತುಂಬಿದೆ ಪ್ರಕೃತಿಯಲಿ !
ಹೆಣ್ಣು ಲೋಕದ ಕಣ್ಣು ಸಮರಸದ ತನಿವಣ್ಣು !
ಪ್ರಕೃತಿಯೇ ಹೆಣ್ಣಾಗಿ ಕಾಡುತಿದೆ ಹದಿನಾಲ್ಕು

ಲೋಕದಲಿ ಪುರುಷನನು ! ಹರಿಹರರು ಪರಮೇಷ್ಠಿ
ದೇವೇಂದ್ರಋಷಿವರರು ಮುನಿಜನರು ಸೋತಾಯ್ತು
ಹೆಣ್ಣು ಬೀರಿದ ಓರೆಗಣ್ಣಿನಾ ಮಿಂಚಿನಲಿ !
ಕಿರುನಗೆಯ ತೊರೆಯ ಹೊಸನೀರಿನಾ ಸುಳಿಯಲ್ಲಿ !

ಸೌಮ್ಯ—(ಸ್ವಗ-)
ನಾನಿವಳಕಣ್ಣ ಮಿಂಚಿನಲಿ ಸೋತಾಯ್ತು ! ಕಿರು
ನಗೆಯ ಸುಳಿಯಲ್ಲಿ ಗಿರಗಿರನೆ ಸುತ್ತುತಿರುವೆನು !

ಹೆಣ್ಣು—ಸಮರೂಪಸುಂದರನ ನಾನೆಲ್ಲಿಕಾಂಬೆನೋ !
ನನಗಾರು ಸಮರುಂಟು ಸುಂದರರು ಲೋಕದಲಿ

ಸೌಮ್ಯ—(ಮರೆಯಿಂದ ಬರುವನು)
ನಾನುಂಟು ಬ್ರಾಹ್ಮಣ ಸುಂದರನು ನಿನಗಿಲ್ಲಿ
ಮುದ್ದುಮೋಹನೆ ಚನ್ನೆ ! ನೀನಾರು ನವಕನ್ಯೆ !

ಹೆಣ್ಣು—ಒಂಟಿಯಲಿ ಹೆಣ್ಣಿರಲು ಮಾತನಾಡಿಸ ತುಂಟ
ನೀನಾರು ? ನನಗೊರ್ವ ವರನು ಬೇಕೆನುತಲೀ
ಕಾಡುಮೇಡನು ಸುತ್ತಿ ಬಲುಬಳಲಿ ಬೆಂಡಾದೆ !

ಸೌಮ್ಯ—ಕಾಡಿನಲಿ ವರವುಂಟೆ ನಾಡಿನಲಿ ಲಭಿಸರೇ !

ಹೆಣ್ಣು—ಕಾಡುಹುಡುಗಿಯು ನಾನು ! ನಮ್ಮಯ್ಯ ಕಾಡು-ದೊರೆ !
ಕಾಡುಗಂಡೇ ಬೇಕು ನಮ್ಮಯ್ಯಗಳಿಯನೆನೆ !

ಸೌಮ್ಯ—ಕಾಡುಗಂಡಾಗಿಹೆನು ನಾನೆಂಬುದನರಿಯೆಯ
ಚಪಲಾಕ್ಷಿ ! ನನಗಿನ್ನು ಮದುವೆಯೇ ಆಗಿಲ್ಲ
ಬೇಕಿತ್ತು ಹೆಣ್ಣೊಂದು ಸಂಸಾರ ರಂಗದಲಿ
ಸೌಮ್ಯಗುಣನೆಂಬುವರು ನನ್ನನ್ನು ಲೋಕದಲಿ !

ಹೆಣ್ಣು—(ನಸುನಾಚುಗೆಯಿಂದ)

(ಸ್ವಗತ)
ಹೃದಯ ಕಾತರಿಸುತಿದೆ ! ಲಜ್ಜೆಯಾವರಿಸುತಿದೆ !

(ಪ್ರಕಾಶ)
ನನಗುಂಟು ವನವೇಣಿ ಎಂದೆಂಬ ಹೆಸರಿಲ್ಲಿ !
ಸುತ್ತಿದೆನು ಕಾಡಿನಲಿ ಎಲ್ಲೆಲ್ಲು ಸಾಕಾಯ್ತು !
ನೋಯುತಿವೆ ಅಂಗಾಲು ಮುಂಗಾಲು ಮೈಯೆಲ್ಲ !
ಸಂಜೆಗೆಂಪಿನಛಾಯೆ ಸುಳಿಯುತಿದೆ ಕಾಡಿನಲಿ
ಒಂಟಿಯಾದೆನು ನಾನು ! ಎಲ್ಲಿನಿಂತರೊಕಾಣೆ
ಸಂಗಡಿಗರೆಲ್ಲ ದಾರಿತಪ್ಪಿತು ದೂರದಲಿ !

ಸೌಮ್ಯ—ಕಾಡು ಹೂ ಒಂಟಿಯೇ ! ಬಂಡುಂಬ ಮರಿದುಂಬಿ
ತಾನಿರಲು ನೆರವಿನಲಿ ! ಭಯವೇಕೆ ವನವೇಣಿ
ಬೆದರದಿರು ತಿರಿದು ತರುವೆನು ಹಣ್ಣು ಹಂಪಲನು
ಮುಡಿಸುವೆನು ತುರುಬಿನಲಿ ವನ ಕುಸುಮ ಮಾಲೆಯನು !

ಹೆಣ್ಣು—(ಬೆಚ್ಚುವಳು)
ಅಂತಾಗಲಿ ಎಚ್ಚರಿಕೆ ಕಾಡುಬೇಡರ ಪಡೆಯು
ತುಂಬಿಹುದು ಕಾಡಿನಲಿ ಹಂದಿ ಬೇಟೆಯನಾಡೆ
ಶಬರ ನಾರಿಯರೆಲ್ಲ ಬಲೆಯ ಬೀಸಿಹರಿಂದು
ಗಂಡು ಹಂದಿಯ ದಾರಿಯಲಿ ನಿಂತು ಮರೆಯಲ್ಲಿ !

ಸೌಮ್ಯ—(ಸ್ವಗತ) ನಿನ್ನ ಬಲೆಗಾಗಲೇ ಬಿದ್ದಿಹುದು ಈ ಹಂದಿ !
(ಪ್ರಕಾಶ) ಭಯವಿಲ್ಲ ಭಯವಿಲ್ಲ ನಾನಂಥ ಗಂಡಲ್ಲ !
ಅರೆಗಳಿಗೆ ಹೊತ್ತಿನಲಿ ಮತ್ತೆ ನಾನಿಲ್ಲಿಹೆನು !
(ನಿಷ್ಕ್ರಮಣ)

ಹೆಣ್ಣು—(ಹಾಡುವಳು)
ಸೌಮ್ಯಗುಣ ಪಾಪ ! ಹೆಣ್ಣೆಂಬ ಆಸೆಯಲಿ
ಮೈಯುಬ್ಬಿ ಓಡಿಹನು ಹಣ್ಣು ಹೂಹಂಪಲನು
ಹೊತ್ತು ಬರುವನು ಹಾಡಿ ಕುಣಿಯುತ್ತ ಪ್ರೇಮದಿಂದ !

ಚಪಲಚಿತ್ತನು ಪುರುಷ ಲಲನೆಯರ ಬಳಿಯಲ್ಲಿ
(ದೃಷ್ಟಿಸಿ) ಅದೋ ವೇಗದಲಿ ಬರುತಿಹನು ಸೌಮ್ಯ ಗುಣಾಂಕ !

ಸೌಮ್ಯ—(ಪ್ರವೇಶಿಸಿ)
ಬಂದೆನಿದೊ ಮದನ ಮೋಹನ ಸುಂದರಿಯೆ ನೋಡು
(ಹಣ್ಣು ಹಂಪಲುಗಳನ್ನು ಅವಳ ಮುಂದಿಟ್ಟು ಹೂಗಳನ್ನು ಮುಡಿಸುವನು)

ಹೆಣ್ಣು—(ನಾಚುಗೆಯಿಂದ ತಲೆತಗ್ಗಿಸುವಳು)
ಸಂಜೆಯಾಯಿತು ಸೌಮ್ಯ ! ನಡೆಯಲಾರೆನು ನಾನು !

ಸೌಮ್ಯ—ಸಿಂಹವನು ಏರಿರುವ ಚಾಮುಂಡಿಯಂತೆ ನೀ
ಯೆನ್ನ ಹೆಗಲೇರಿ ಕುಳಿತೊಡನೆ ಕೊಂಡೊಯ್ವೆ ನಾಂ !
ನವಮೋಹನಾಂಗಿ ಮನ್ಮನೋಹರಿ ಚಿತ್ರಾಂಗಿ

ಹೆಣ್ಣು—ಬ್ರಾಹ್ಮಣನು ನೀನಾಗಿ ಕಾಡುಬೇಡರ ಹುಡುಗಿ
ನಾನಾಗಿ ಮದುವೆಯಾಗುವುದೆಂತು ಸೌಮ್ಯಗುಣ !

ಸೌಮ್ಯ—ಬ್ರಾಹ್ಮಣ ಶಬರ ವಿವಾಹಕ್ಕುಂಟು ಸುಮ್ಮತಂ
ಶಾಸ್ತ್ರದಲಿ ! ಮನವೊಲಿದ ಗಂಡು ಹೆಣ್ಣುಗಳಿಗುಂಟು
ಗಾಂಧರ್ವ ರೀತಿಯಲಿ ದೇಹ ಸಂಬಂಧ ಸುಖ !
ಯತಿದೇವ ಕಲಿಪಾರ್ಥನಿಲ್ಲ ಆಶ್ರಮದಲ್ಲಿ !
ಈ ರಾತ್ರಿ ಆ ಬಳ್ಳಿ ಮನೆಯಲ್ಲಿ ಪಲ್ಲವದ
ಶಯ್ಯೆಯಲಿ ಗಾಂಧರ್ವ ದಾಂಪತ್ಯ ಸುಖದಲ್ಲಿ
ಓಲಾಡಿ ಕೇಲಾಡಿ ನಲಿಯೋಣ ! ತಂಗಾಳಿ
ಬೀಸುತಿದೆ ಹಾಲು ಬೆಳುದಿಂಗಳ ರಾತ್ರಿಯಲಿ !

ಹೆಣ್ಣು—ಲತಾಗೃಹವೆಲ್ಲಿಹುದೊ ! ನಾನರಿಯೆ ! ವಿಪ್ರವರ್ಯ !

ಸೌಮ್ಯ—(ಹೆಣ್ಣನ್ನು ಹೆಗಲಮೇಲೆ ಕುಳ್ಳರಿಸಿಕೊಂಡು)
(ಸ್ವಗತ) ಯಾವ ಜನ್ಮದ ಪುಣ್ಯಫಲವೊ ! ಸಂದಾಯಿತ್ತಿಂದು !
(ತೆರೆ ಬೀಳುವುದು) (ನಿಷ್ಕ್ರಮಣ)

## ದೃಶ್ಯ ೭

(ಸತ್ತ ಹಂದಿಯ ಸಮೀಪದಲ್ಲಿ ಋಷಿ-ಪಾರ್ಥ ಬಂದು ನಿಲ್ಲುವನು ಕಿರಾತ ಶಂಕರ ಕಿರಾತ ಗೌರೀ ಕಿರಾತನಂದಿ ಪ್ರವೇಶಿಸುವರು)

ಅರ್ಜುನ—ನೋಡಿದೆಯ ಪುಳಿಂದಾ ! ನಂದಿಗಿರಿ ಬಿದ್ದಂತೆ
ಕಾಡುಕಿಟಿ ಒರಗಿಹುದು ನಾನೆಚ್ಚ ಬಾಣದಿಂ !
ಮುಟ್ಟದಿರು, ಬಾ ಇಲ್ಲಿ ! ನೀನಾರು ನಿನಗೇಕೆ
ರಾಯರೊಡವೆಯ ಚಿಂತೆ ! ಬೇಟೆಯಲಿ ಜಿಂಕೆವೊಲ
ನರಿಹುಲ್ಲೆ ಹಿಂಡುಗಳ ತರಿದಟ್ಟಿ ಕೊಂದುಂಬ
ಬಡಬೇಡ ಪಡೆಯಲ್ಲಿ ಶೂರರಿಹರೇ ಹಂದಿ
ಯನು ಕೊಂದು ಕೆಡಹುವೊಡೆ ! ಸಾಕಿನ್ನು ಸುಮ್ಮನಿರು !

ಕಿರಾತ ಶಂಕರ—ಲೇಸನಾಡಿದೆಯಯ್ಯ ! ಮತಿವಂತ ನೀನಲ್ಲ
ಶಬರ ಶಕ್ತಿಯನರಿಯೆ ! ನೋಡು ನೆಟ್ಟಿಹುದು ಶಿವ
ಶೂಲದಂತೆ ನಾ ಬಿಟ್ಟ ಶರ ಹಂದಿಯೆದೆಯಲ್ಲಿ !
ನಿನ್ನ ಶರ ತಾಕಿಹುದು ಕಿಟಿಯ ಬೆನ್ನಿನಲಿ ಬರಿದೆ !
ಈ ಬೇಟೆಯನು ಬಿಟ್ಟುಕೊಡುವವರು ನಾವಲ್ಲ
ಹರಿಬ್ರಹ್ಮಬಂದರೂ ಸಾಟಿಯಾಗರು ನಮಗೆ
ಬೇಟೆಯಾಟದಲಿ ! ಅಂಜಲಾರೆವು ನಾವಿನ್ನು
ಕಿತ್ತಡಿಗೆ ! ಮುಟ್ಟದಿರು ಹಂದಿಯನು ದುಡುಕದಿರು.

ಅರ್ಜುನ—ನಿನಗೇಕೆ ಬಲುಮಾತು ಗಳುಪದಿರು ಹುಲುಬೇಡ !
ಯಾರೆಂದು ತಿಳಿದು ನಿಂತಿರುವೆ ನಮ್ಮೆದುರಿನಲಿ !

ಕಿರಾತ ಶಂಕರ—(ನಕ್ಕು)
ಏನು ತಮ್ಮಡಿ ! ನಿನಗೇಕೆ ಖಡ್ಗಧನು ಶರಾವಳಿ !
ನಿನಗಾರು ನಂಟರ್‌ೈ ಕಾಡಿನಲಿ ಮೇಣ್ ಲೋಕ
ಮೂರರಲಿ ! ಆಕೆವಾಳರ ಕರೆಸು ಅವಿವೇಕ

ವೆಸಗದಿರು ನೀನೆತ್ತ ಏಕಾಕಿ ನಿನಗೇಕೆ
ಕಾಳಗದ ಬಲುಚಿಂತೆ ! ಬೇಟೆಯನು ಬಿಡುವೆವೇ .
ತೋಳ ತೀಟೆಯ ಹರಿಸಿಕೊಂಬೆವು ರಣಾಗ್ರದಲಿ !

ಅರ್ಜುನ—ಮೃಗಪಕ್ಷಿ ಸಂಕುಲದ ಬೇಟೆಯನು ಬಲ್ಲನರು
ನೀವೆಂಬುದನು ಬಲ್ಲೆ ! ಜಾತಿಧರ್ಮವು ನಿಮಗೆ !
ಬಲಹುಳ್ಳವರು ನಾವು ನಿಮ್ಮೊಡನೆ ಸೆಣಸುವೆವೆ !
ಬಲ್ಲಿದರು ಎಲ್ಲಿಹರು ಬರಲೀಗ ಹುಲುಮನುಜ
ನಿನಗೇಕೆ ರಾಯರಂಬಿನ ಬಾಣರುಚಿ, ಪಾಪ!

ಕಿರಾತ ಶಂಕರ—ಕಾಡುಗೊರವರು ನಾವು ಕಾಡಿನಲಿ ಹುಟ್ಟಿದೆವು
ಕಾಡಿನಲಿ ಬಳೆದಿಹೆವು. ನೋಡಿಲ್ಲ ನಿನ್ನಂಥ
ಕೌತುಕದ ಮುನಿಗಳನು ! ಶಾಸ್ತ್ರದಲಿ ಬಲ್ಲಿದರು
ಶಸ್ತ್ರಗಳ ಹಿಡಿದಿರಾ ಮೃಗಯಾ ವಿಹಾರದಲಿ !

ಅರ್ಜುನ—ನಾಡರಾಯರು ನಾವು ! ಕಿತ್ತಡಿಯು ನಾನಿಂದು
ಸಟೆಯಲ್ಲ ! ವೇಷದಲಿ ಯತಿಯಾಗೆ ತಪ್ಪೇನು ?
ಜಟೆ ಗಜಾಜಿನ ಭಸ್ಮದೊಡನುತ್ಕಟದ ಖಡ್ಗ
ಧನು ಶರಗಳನು ಧರಿಸಿಹನು ಶಿವನು ನಾನವನ
ಶಿಷ್ಯನೆಂಬುದ ನರಿಯೆಯಾ ಹೆಗ್ಗಾಡ ಗೊಗ್ಗಯ್ಯ !

ಕಿರಾತ ಶಂಕರ—ನಮಗೇಕೆ ನಿಮ್ಮೊಂದು ಗುರು ಶಿಷ್ಯ ಸಂಬಂಧ
ನೀವಂತು ಮುನಿವರರು ನಮಗೇಕೆ ತತ್ತ್ವಾರ್ಥ !
ಮೃಡನ ಭಕುತರು ನಾವು ಬಿಡೆವು ಹಂದಿಯನಿಂದು
ಹೂಡು ಬಾಣವನು ಹೋರಾಡು ಸಮರದಲಿ
ಭಿಕ್ಷುಕರು ನಾವಲ್ಲ ಬೇಟೆಯನು ಒಪ್ಪಿಸಲು !

ಅರ್ಜುನ—(ಹೂಂಕರಿಸಿ ಬಾಣವನ್ನು ಎಳೆಯಲು ಕೈಯಿಡುವನು)
ಏನಿದಚ್ಚರಿ ! ಬಾಣವೇ ಬಾರದಿದೆ ಹರಹರಾ
ಶಿವಪೂಜೆಯಂ ಬಿಟ್ಟುಬಂದುದೇ ಅಪರಾಧ !

ಅಕ್ಷಸ್ಯ ಅಪರಾಧ ! (ಆಲೋಚಿಸಿ) ನಿಲ್ಲು ಒಂದರ ಘಳಿಗೆ
ಶಿವಪೂಜೆಗೈದು ಬರುವೆನು ಹೊಳೆಯ ತೀರದಲಿ.

ಶಬರ—ಅಂತಕ್ಕೆ ನಾನಿಲ್ಲಿ ಕುಳಿತಿರುವೆ ನೋಡುತ್ತ
ಕೋಡುಗಲ್ಲಿನ ಮೇಲೆ ಬಾಣಗಳ ಮಸೆಯುತ್ತ
ಶಂಕರನ ನೆನಪಿನಲಿ ! ಹೋಗಿ ಬಾ ತಮ್ಮಡಿಯೇ !

(ಇಬ್ಬರೂ ನಿಷ್ಕ್ರಮಣ)

(ತೆರೆ ಬೀಳುವುದು)

## ದೃಶ್ಯ ೮

(ತೆರೆಯು ಮುಂದೆ)

ಸೌಮ್ಯ—(ಒಂದು ಕಡೆಯಿಂದ ಪ್ರವೇಶಿಸಿ)
ಸರಿಯಾಯ್ತು ! ಶಬರನಿತ್ತ ! ಮುನಿಯತ್ತ ! ನಾನೆತ್ತ !

ಹೆಣ್ಣು—(ಇನ್ನೊಂದು ಕಡೆಯಿಂದ ಪ್ರವೇಶಿಸುತ್ತ)
ನೀನಿತ್ತ ಬಾ ಸೌಮ್ಯ ! ಉಯ್ಯಾಲೆಯಾಡೋಣ

ಸೌಮ್ಯ—ಮದನ ಭಿಕ್ಷೆಯ ನೀಡು ಮನದಣಿಯೆ ವನವೇಣಿ
ರಾತ್ರಿಯನು ಕಳೆದಾಯ್ತು ಬ್ರಹ್ಮಚರ್ಯ ವ್ರತದಲಿ

(ಹತ್ತಿರ ಹೋಗುವನು)

ಹೆಣ್ಣು—ಶಿವನಾಣೆ ಮುಟ್ಟದಿರು ಅಂಗನೆಯು ಒಲಿಯುವುದು
ಬಂಗಾರ ದೊರೆಯುವುದು ಸಂಗ್ರಾಮದಲಿ ಜಯವು
ಲಭಿಸುವುದು ಇವು ಮೂರು ಲಿಂಗಯ್ಯನೊಲುಮೆಯೊಳು
ವ್ರತವೊಂದು ಉಂಟೆನಗೆ ಮಾಸಪರ್ಯಂತರವು
ಏಸುಜನ್ಮದ ಪುಣ್ಯಫಲವಿದೋ
ಭೂಸುರಾಂಗನ ಪಡೆದಿಹೆನು ನಾನು ಕಾಡಿನಲಿ
ದುಡುಕದಿರು ಸೌಮ್ಯಗುಣ ನಾನಿರಲು ಬಳಿಯಲ್ಲಿ

ಸೌಮ್ಯ—ಧನ್ಯೋಸ್ಮಿ ಮದನಾಂಗಿ ತಾಪಸಿಯ ರೀತಿಯಲಿ
ಹೊಳೆಯ ತೀರದಲಿ ಮಾಡುವೆನು ಸೈಕತಲಿಂಗ
ಪೂಜೆಯನು ನಿನ್ನವ್ರತ ನಿನಗಿರಲಿ ಶಾಂತಿಯಲಿ

ಹೆಣ್ಣು—ಹಗಲು ವ್ರತವಿಲ್ಲ ನನಗೆ ರಾತ್ರಿಯಲಿ ವ್ರತವುಂಟು
ಹಗಲುವ್ರತ ನಿನಗುಂಟು ರಾತ್ರಿಯಲಿ ವ್ರತವಿಲ್ಲ
ನಮಗಿಲ್ಲ ಸಮ್ಮೇಳ ವ್ರತಕಾಲಪರ್ಯಂತ

ಸೌಮ್ಯ—ಲಿಂಗಪೂಜೆಯೊಳಿಹನು ಫಲ್ಗುಣ ನೇಮದಲಿ
ನಾನವನ ಸೇವೆಯಲಿ ನಿಲ್ಲುವೆನು ಅನುದಿನಂ

ಹೆಣ್ಣು—ಅರ್ಜುನನ ಪೂಜೆಯಲಿ ಫಲವೇನು ಸೌಮ್ಯಗಣ !

ಸೌಮ್ಯ—ಬೇಡರನು ಕಾಳಗದಿ ಜಯಿಸುವೆನು ಎಂದೆಂಬ
ನೆಚ್ಚುಂಟು ಕೆಚ್ಚುಂಟು ಪೂಜೆಯಲಿ ಪಾರ್ಥಂಗೆ

ಹೆಣ್ಣು—ಸಿದ್ಧಿಸಲಿ ತಪಃಫಲ ಕಲಿಪಾರ್ಥ ಮುನಿವರಗೆ

ಸೌಮ್ಯ—ನೋಡಲ್ಲಿ ತಾಪಸಿಯು ವೇಗದಿಂ ಬರುತಿಹನು
ನಾವಿಲ್ಲಿ ನಿಲ್ಲೋಣ ಮರೆಯಲ್ಲಿ ನೆಳಲಲ್ಲಿ ! (ನಿಷ್ಕ್ರಮಣ)

ಅರ್ಜುನ—(ಪ್ರವೇಶಿಸಿ) (ಸ್ವಗತ)
ಶಿವಪೂಜೆಯಿಂ ಚಿತ್ತಪ್ರಸನ್ನತೆ ಲಭಿಸಿರಲು
ಸಂಕಲ್ಪ ಸಿದ್ಧಿಪುದು ಸಮರದಲಿ ವೈರಿಯನು
ಮೆಟ್ಟುವೆನು ಗಾಂಡೀವ ಧನುಷ್ಟಂಕಾರದಲಿ !
ಮೂಲೋಕಮಂ ನಡುಗಿಸುವೆನು ಶಬರ ಗಿಬರರ
ಮಾತೇಕೆ ! ಗಾಂಡೀವಿಯೇಂ ಷಂಡನೇನಲ್ಲ
ಉದ್ದಂಡ ರಣವೀರನೆಂಬುದನು ತೋರುವೆನು.
(ಪ್ರಕಾಶ) ರೇ ! ವ್ಯಾಧ ! ನಿಲ್ಲುಬಾ ರಣರಂಗ ಮುಖದಲ್ಲಿ

ಶಬರ ಶಂಕರ—(ಪ್ರವೇಶಿಸುತ್ತ)
ಕೆತ್ತಡಿಯೆ ಬಾ ನಿಲ್ಲು ! ಶಿವಪೂಜೆಯಾಯಿತೇ !

ಆ ಕೋಡುಗಲ್ಲಿನ ತುದಿಯ ಕೊನೆಯಲಿ ಕುಳಿತಿರ್ಪ
ಹಕ್ಕಿಯನು ಗುರಿಯಟ್ಟು ಕೆಡಹಿದೊಡೆ ಬಲ್ಲಿದನು
ನೀನೆ ಬಿಲ್ಲು ಕಾಳೆಗದಲಿ ; ಹಂದಿ ನಿನಗಿರಲಿ.
ನಾನು ಕೆಡಹಿದೊಡೆ ಹಂದಿ ನನಗಿರಲಿ ಮುನಿಯೇ !

ಅರ್ಜುನ—ಅಂತೆಂತು ! (ಬಾಣ ಪ್ರಯೋಗ ಮಾಡುವನು)

ಶಬರ ಶಂಕರ—ಇಟ್ಟ ಗುರಿ ತಪ್ಪಾಯ್ತು ! ಮುದಿಹಕ್ಕಿ ಮುಗ್ಗುರಿಸಿ
ಬಿದ್ದಾಯ್ತು ಹಳ್ಳದಲಿ ಎತ್ತುವೆನು ನಾನದನು
ಬಾಣದಲಿ ನೋಡುತಿರು ಕಿತ್ತಡಿಯೆ ನಿಮಿಷದಲಿ !
(ಬಾಣ ಪ್ರಯೋಗಮಾಡುವನು)

ಅರ್ಜುನ—ಒಪ್ಪಿದೆನು ಹಕ್ಕಿ ಸತ್ತಿಲ್ಲ ಮತ್ತೆ ಹಾರಿತು
ಗಗನದಲಿ. ಖಡ್ಗಯುದ್ಧದಲಿ ತೋರುಬಲವನು !

ಶಬರ ಶಂಕರ—(ಖಡ್ಗವನ್ನು ಒರೆಯಿಂದ ಸೆಳೆದು ನಿಲ್ಲುವನು)
(ಇಬ್ಬರೂ ಖಡ್ಗಯುದ್ಧ ಮಾಡುವರು. ಅರ್ಜುನನ ಖಡ್ಗ ತುಂಡಾಗಿ ಬೀಳುವುದು)

ಅರ್ಜುನ—ಅಕಟಕಟ, ಶಿವನ ಕೃಪೆ ತಪ್ಪಿಹುದು ನನ್ನಲ್ಲಿ !
ಮತ್ತೊಮ್ಮೆ ಶಿವಪೂಜೆಗೈದು ಬರುವೆನು ಶಬರ !
(ನಿಷ್ಕ್ರಮಣ)

(ಶಬರ ಶಂಕರ ನೋಡುತ್ತ ನಿಲ್ಲುವನು)

ಸೌಮ್ಯ-ವನವೇಣಿ—(ಇಬ್ಬರೂ ಪ್ರವೇಶಿಸುವರು)

ಹೆಣ್ಣು—ಗೆದ್ದವರು ಯಾರು ? ಶಬರನೋ ತಪಸ್ವಿಯೋ ?

ಸೌಮ್ಯ—ಗೆದ್ದವನು ಶಬರನೇ ! ಸೋತವನು ತಾಪಸಿಯೇ !

ಶಬರ ಶಂಕರ—ನೀವಾರು ನಿಮ್ಮ ನೆಲೆ ಎಲ್ಲಿಹುದು ? ಇಲ್ಲೇಕೆ
ಬಂದಿಹಿರಿ ? ನೀವೇನು ಪ್ರೇಮಿಗಳೊ ವನಚರರೊ !

ಸೌಮ್ಯ—ಶಂಕರನು ಗಿರಿಜೆಯನು ಮೆಚ್ಚಿದಂದದಲಿ ನಾ
ಬಯಸಿಹೆನು ಈ ಕಾಡು ಕನ್ಯೆಯನು ಮನಸಾರೆ.
ವನವೇಣಿ ನಾಮದಲಿ ನಿಂತಿಹಳು ಇದಿರಿನಲಿ
ಸೌಮ್ಯಗುಣನೆಂಬ ಬ್ರಹ್ಮಚಾರಿಯು ನಾನಿಂದು
ಶಿವಯೋಗಿ ಫಲ್ಗುಣನ ಸೇವೆಯಲಿ ಬಂದಿಹೆನು
ನೀನೆಮಗೆ ನಿಜಸಾಕ್ಷಿ ವೈವಾಹ ಸಂಗದಲಿ !
ಇಲ್ಲದೊಡೆ ನಾನಿನ್ನು ಸಂನ್ಯಾಸಿ ಅವಳೊರ್ವ
ಯೋಗಿಣಿಯು ! ವಿಜಯಿಸ್ಯೆ ಶಬರೇಶ ಸಮರದಲಿ !

ಶಬರ ಶಂಕರ—(ಅತ್ತ ನೋಡಿ)
ನೋಡಲ್ಲಿ ಬರುತಿಹಳು ನನ್ನ ನವಗಿರಿಕನ್ಯೆ
ಶಬರಿಯರ ಸೀಮಂತಮಣಿ ನಾರಿಯರ ನಿತ್ಯ
ಮಾಂಗಲ್ಯ ಮಹಾರತ್ನ ! ನನ್ನ ಶ್ರೀ ಜಯ ಶಕ್ತಿ !
ಗೆಲ್ಲುವಡೆ ಸೋಲುವಡೆ ನಾನಲ್ಲ ! ನನ್ನೆಲ್ಲ
ಶಕ್ತಿ ಸಂಕೇತವೀ ವನ ಶಬರಿಗಿರಿಕನ್ಯೆ !
ಬಿನ್ನವಿಸು ನಿನ್ನೆಲ್ಲ ಹಂಬಲವನು ದೇವಿಯಲಿ !

ಶಬರಿ ಗೌರಿ—ಶಬರೇಶ ! ಕಿತ್ತಡಿಯ ಶಿವಪೂಜೆ ಮುಗಿದಿಹುದು !
ಓಂಕಾರ ಪಂಚಾಕ್ಷರೀ ಮಂತ್ರ ಮೊಳಗುತಿದೆ
ವನರಾಜಿ ಮಧ್ಯದಲಿ, ನುಡಿಯುತಿದೆ ಶೂನ್ಯದಲಿ,
ಭಕ್ತನನು ರಕ್ಷಿಸಲು ಶಿವನಿಹನು ಬಳಿಯಲ್ಲಿ !

ಶಬರ ಶಂಕರ—ಶಿವಪೂಜೆಯ ಫಲಂ ಸದಾಸಿದ್ಧ ಪಾಥೇಯ
ಮಲ್ತೆ ! ವನಜಾಕ್ಷಿ ನಿಷ್ಠೆ ಮುಕ್ತಿಯ ಶುಭನಾಂದಿ !
ಸಿದ್ಧಿಸಲಿ ಕಿತ್ತಡಿಯ ಸಂಕಲ್ಪ ಬೇಗದಲಿ

ಶಬರಿ ಗೌರಿ—(ಪಕ್ಕಕ್ಕೆ ನೋಡಿ)
ಯಾರಿವರ್‍ಸು ! ಎಲ್ಲಿಂದ ಬಂದಿಹರೊ ! ಕಾಡಿನಲಿ !

ಹೆಣ್ಣು—ಮೂಕ ದಾನವನ ಗುಹೆಯಿಂದ ಬಂದಾಯ್ತು ನಾಂ !
ವನವೇಣಿ ಎಂದೆಂಬ ಶಬರಕನ್ಯೆಯು ನಾನು
ರಾಕ್ಷಸನ ಮರಣದಲಿ ಸಿದ್ಧಿಸಿತು ಬಿಡುಗಡೆಯು
ಸೌಮ್ಯಗುಣ ಸಂಧಿಸಿದ ದಾರಿಯಲಿ ಶಿವನಂತೆ

ಸೌಮ್ಯ—ನಾನಿಹೆನು ಅರ್ಜುನನ ಶಿವಯೋಗ ಶಾಲೆಯಲಿ
ಯತಿವರನ ಸೇವೆಯಲಿ ! ಬ್ರಹ್ಮಚರ್ಯವ್ರತದಲಿ !
ಶಿವನು ಗಿರಿಜೆಯನು ಮೆಚ್ಚಿದಂದದಿ ಮೆಚ್ಚಿದೆನು
ವನವೇಣಿ ಶಬರಿಯನು. ಮುತ್ತಿದೆ ನೀನಿಂದು
ಸಾಕ್ಷಿಯಿರೆ ನಮಗಿರಲಿ ದಾಂಪತ್ಯ ಸಂಬಂಧ !

ಶಬರಗೌರಿ—ಹೆಣ್ಣಿನಾಸೆಯ ಹೆಣ್ಣು ಬಲ್ಲುದಲ್ಲದೆ ಗಂಡು
ಬಲ್ಲುದೇ ಲೋಕದಲಿ. ಹೆಣ್ಣು ಹೂ ! ಗಂಡು ನೊಣ !

ಶಬರ ಶಂಕರ—ನೀನಿಲ್ಲಿ ನಿಂತು ನೋಡುತಿರು ಸಮರವನು
ಬೆದರದಿರು ಹೆದರದಿರು ಶಬರಿ ರಣ ಭೂಮಿಯಲಿ

(ನಿಷ್ಕ್ರಮಣ)

ಅರ್ಜುನ—(ತೆರೆಯ ಹಿಂದೆ)
ಬಾ ಶಬರ ತೋರುವೆನು ಕಿತ್ತಡಿಯ ಶಕ್ತಿಯನು !

(ತೆರೆ ಬೀಳುವುದು)

## ದೃಶ್ಯ ೯

(ವನಪ್ರಾಂತ. ಪುಷ್ಪರಥ, ಚಿತ್ರಚೂಡ–ಇಬ್ಬರೂ ಬರುವರು)

ಪುಷ್ಪರಥ—ನೋಡಿದೆಯ. ಚಿತ್ರಚೂಡ ! ಶಂಕರನ ಲೀಲೆಯನು !
ಪಾರ್ಥಯತಿ ಶಬರ ಶಂಕರರ ಹೋರಾಟವನು
ಉಭಯ ಭೈರವರ ರೂಪಿನಲಿ ಕಾಂಬುವರಲ್ಲಿ
ಖಡ್ಗ ಸಮರದಲಿ ಸ್ಪರ್ಧಿಸುತ ಸಿಂಹಗಳಂತೆ !

ಚಿತ್ರಚೂಡ—ನೋಡಲ್ಲಿ ಪುಷ್ಪರಥ ! ಶಬರ ಝಳಪಿಸಿದ
ನೀಳ್ಗತ್ತಿ ಮಿಂಚಿನಂತೆಯೆ ಹೊಳೆಯುತ್ತ ಕತ್ತರಿಸಿ
ಬೀಳಿಸಿತು ಕಿತ್ತಡಿಯ ಕತ್ತಿಯನು ನಿಮಿಷದಲಿ
ಭಲೇ ! ಭಾಪು ! ಉಘೇ ! ಜಯ ! ಭದ್ರಬಲ ಶಬರೇಂದ್ರ !

ಪುಷ್ಪ—ಎತ್ತಿದನು ಕತ್ತಿಯನು ಕಿತ್ತಡಿಯು ನಿಮಿಷದಲಿ
ಹಾರಿದನು ಹುಲಿಯಂತೆ ಮೇಲೆರಗಿ ಬೀಸಿದನು
ಗುರಿಯಿಟ್ಟು ಶಬರಶಂಕರನತ್ತ ! ರಭಸದಲಿ !

ಚಿತ್ರ—ಅಯ್ಯಯ್ಯೊ ! ಹುಸಿಯಾಯ್ತು ಅರ್ಜುನನ ಕೊರಸಿಯು !
ತುಂಡುತುಂಡಾಯ್ತು ಶಬರಶಂಕರ ಪ್ರಳಯಾಗ್ನಿ
ಖಡ್ಗದಾಘಾತದಿಂ ! ಬೆಚ್ಚಿದನು ಕಲಿಪಾರ್ಥ
ಹೂಡಿದನು ಬಾಣವನು ಗಾಂಡೀವ ಚಾಪದಲಿ
ಶರಜಾಲ ಮುಸುಕುತಿದೆ ಪುಂಖಾನು ಪುಂಖದಲಿ
ಓಡಿದರು ದೆಸೆಗೆಟ್ಟು ಶಬರ ಪ್ರಮಥ ಗಣಗಳು
ನಂದೀಶ ನಡುಗಿದನು ಶ್ರೀ ಗೌರಿ ಹೆದರಿದಳು !

ಪುಷ್ಪ—ನಗುನಗುತ ನಿಂತಿಹನು ಶಬರಶಂಕರನಲ್ಲಿ
ಶರಜಾಲ ತಾಗದೆಯೆ ಬ್ರಹ್ಮಾಂಡ ರೂಪದಲಿ !
ಮಂಜು ಮುಸುಕಿದೊಡೇನು ಗಿರಯುಂಜುವುದೆ ಮತ್ತೆ
ಹಾಲಾಹಲವನು ನೊಣ ಮುತ್ತುವುದೆ? ಬಡಬಾಗ್ನಿ
ನೆನೆವುದೆ ತುಷಾರದಲಿ? ಅರ್ಜುನನ ಶರಾವಳಿ
ತಾಗುವುದೆ ಧೂರ್ಜಟಿಯ ಶುಭದಿವ್ಯ ದೇಹವನು !

ಚಿತ್ರ—ಕೆರಳಿದರು ನೋಡಲ್ಲಿ ಹೇರಂಬ ಷಣ್ಮುಖರು
ಅರ್ಜುನನ ಗರ್ವವನು ಜರಿಯುತ್ತ ನುಗ್ಗಿದರು
ವರ ವೀರಭದ್ರಾದ್ಯಖಿಳಶಬರ ಪ್ರಮಥಗಣ
ಕಿತ್ತಡಿಯ ಎದುರಿನಲಿ ರಣಮಾರಿ ಗಣದಂತೆ

ಪುಷ್ಪ—ಅರ್ಜುನನ ತೂಣೀರ ಬರಿದಾಯ್ತು ನೋಡತ್ತ !
ಹಾಯೆಂದು ಘರ್ಜಿಸುತ ಫಲ್ಗುಣಂ ಮೇಲ್ವಾಯ್ದು
ಚಾಪದಿಂದಪ್ಪಳಿಸಿ ಹೊಯ್ದನಾ ಶಬರನಂ !

ಚಿತ್ರ—ಮೆಲುನಗೆಯ ಬೀರುತ್ತ ಶಬರನಾಯಕ ಶಿವಂ
ಸೆಳೆದುಕೊಂಡನು ಫಲ್ಗುಣನ ಮಹಾಚಾಪವನು
ಪ್ರಮಥಗಣ ಪಾರ್ವತಿಯು ಬೆರಗಾಗೆ ನಿಮಿಷದಲಿ !
ಬರಿಗೈಯ ಕಲಿಪಾರ್ಥ ಮರದ ಹೆಗ್ಗೊಂಬುಗಳ
ಮುರಿಮುರಿದು, ಹೊಯ್ದು ಕಲ್ಗುಂಡುಗಳ
ಸುರಿಸುವನು ಮುಂಗಾರು ಮಳೆಯಂತೆ ರೋಷದಲಿ
ಶಬರಶಂಕರಮೂರ್ತಿ ನಿಂತಿರಲು ಚಲಿಸದೆಯೆ !

ಪುಷ್ಪ—ನೋಡತ್ತ ಚಿತ್ರಚೂಡ ! ಅರ್ಜುನನು ಘರ್ಜಿಸುತ
ನುಗ್ಗಿದನು ಶಿವನತ್ತ ನಿಜಭುಜಾಸ್ಫಾಲನಂ
ಗೈದು ಮಲ್ಲಯುದ್ಧದಲಿ ಜಯಿಸುವೆನೆಂದೆಂಬ
ಹಮ್ಮಿನಲಿ ಭೂತಗಣ ಬೆರಗಾಗೆ ನಿಂತಲ್ಲಿ !

ಚಿತ್ರ—ಇರ್ವರುಂ ಬಾಹುಗಳನಪ್ಪಳಿಸಿ ಬೊಬ್ಬಿಟ್ಟು
ಒರ್ವರೊರ್ವರಂ ಪಿಡಿದು ಕೈಯ್ಗಳನು ನೀಡುತ
ತೊಡೆಗಳನು ತಟ್ಟುತ್ತ, ನಾನಾ ಪಟ್ಟುಗಳಿಂದ
ತುಡುಕುವರು ಹರ ನರರು ಜಗಜಟ್ಟಿಮಲ್ಲರಾ
ಟೋಪದಲಿ ಉರುತರದ ಜಾಣ್ಮೆಯಲಿ ಪ್ರಮಥಗಣ
ಪಾರ್ವತಿಯು ನಿಂದಿರಲು ಬೆಕ್ಕಸಂ ಬೆರಗಾಗಿ !

ಪುಷ್ಪ—ಅಬ್ಬಬ್ಬ ! ಫಲ್ಗುಣಂ ಗುದ್ದಿದನು ಮುಷ್ಟಿಯಿಂ
ಶಿವನ ಮಸ್ತಕದಲ್ಲಿ ಬಾಹುಬಲ ಸತ್ವದಿಂ
ನೋಡಲ್ಲಿ ! ಹರನವಕ್ಷಸ್ಥಳವನುರೆತಿವಿದು
ನರನಾದರ್ು ಬೊಬ್ಬಿರಿದನು ಅಪ್ರತಿಮಶಕ್ತಿಯಲಿ

ಚಿತ್ರ—ಸಾಹಸಂ ! ಪ್ರಚಂಡಸಾಹಸಂ ! ನೋಡತ್ತ
ಶಬರೇಶ ಅರ್ಜುನನ ಹಿಡಿದೆಳೆದು ಕೆಡಹಿದನು
ಮಲ್ಲಭೂಮಿಯಲಿ ! ಮೆಟ್ಟಿದನು ಪಾರ್ವತಿಯತ್ತ
ಕಣ್ನೋಟ ಸರಿಸುತ್ತ ಕರುಣಾರ್ದ್ರ ಹೃದಯದಿಂ !
ಅರ್ಜುನನು ಮೂಗಿನಲಿ ಬಾಯಿಯಲಿ ಕಾರುವನು
ನೋಡಲ್ಲಿ ರಕ್ತವನು ! ಬಿದ್ದಿಹನು ತಮ್ಮಡಿಯು
ಪ್ರಜ್ಞೆಯಿಲ್ಲದೆ ನೋಡು ! ಮುಂದೇನು ಸಮನಿಪುದೊ !

ಪುಷ್ಪ—ಶಿವನು ಕೃಪೆಯಿಂದ ಋಷಿ ಫಲ್ಗುಣನ ಮೈಸವರಿ
ಬೀಸುವನು ಗಾಳಿಯನು ಭಕ್ತನೆಂದೆಂಬ ನಿಜ
ವಾತ್ಸಲ್ಯ ತುಂಬಿರಲು ಹೃದಯದಲಿ ನೋಡಲ್ಲಿ !
ಅರ್ಜುನಂ ಕಣ್ದೆರೆದು ನೋಡಿದನು ಸುತ್ತೆಲ್ಲ
ಮರುಗುವನು ತನಗಾದ ಪರಿಭವವ ನೆನೆನೆನೆದು !

ಚಿತ್ರ—ನೋಡಲ್ಲಿ ! ಶಬರಿ ಪಾರ್ವತಿಪುಳಿಂದಗಣಗಳು
ಬರುತಿಹರು ತವಕದಲಿ ಧೂರ್ಜಟಿಯ ಸನ್ನಿಧಿಗೆ !

ಪುಷ್ಪ—ಕತ್ತೆತ್ತಿನೋಡಲ್ಲಿ ಚಿತ್ರಚೂಡ ಕೈಲಾಸ
ಗಿರಿಯಲ್ಲಿ ಋಷಿವೃಂದ ನೋಡುತಿದೆ ಕೌತುಕದಿ
ಶಬರ ಶಂಕರಲೀಲೆಯನು ಮನದಣಿಯೆ ನಿಂತು !

ಚಿತ್ರ—ಅರ್ಜುನನ ತಪಃಫಲ ಸಿದ್ಧಸಲಿ ಬೇಗದಿಂ !
ನಾವೀಗ ತೆರಳೋಣ ಫಲ್ಗುಣನ ವನದತ್ತ !

(ತೆರೆ ಬೀಳುವುದು)

## ದೃಶ್ಯ ೧೦

(ಶಿವಲಿಂಗ ಪೂಜೆಯಲ್ಲಿ ನಿರತನಾಗಿರುತ್ತಾನೆ ಅರ್ಜುನ)

(ತೆರೆಯ ಮುಂದೆ)

ಸೌಮ್ಯ—(ಪ್ರವೇಶಿಸುತ್ತ)
"ಬ್ರಹ್ಮಮುರಾರಿ ಸುರಾರ್ಚಿತಲಿಂಗಂ ನಿರ್ಮಲಭಸಿತಸುಶೋಭಿತಲಿಂಗಂ
ಜನ್ಮಜದುಃಖ ವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಂ||"
(ಎಂದು ಹೇಳಿಕೊಂಡು ಬರುವನು)

ಅರ್ಜುನ—(ಇನ್ನೊಂದು ಕಡೆಯಿಂದ ಪ್ರವೇಶಿಸುವನು)
ಸೌಮ್ಯಗುಣ ! ಎನಗಿಂದು ಪರಾಭವವಾದುದಂ
ನೆನೆದೊಡೆ ಪುರಾಕೃತ ದುಷ್ಕರ್ಮ ವೆನಿಸುವುದು !
ಶಿವಮಂದಿರಗಳನು ಕೆಡಹಿ ಶಿವನ ತತ್ತ್ವವನು
ಹಳಿದೆನೋ ! ಶಿವಭಕ್ತರನು ಜರಿದು ಗುರುಲಿಂಗ
ಜಂಗಮರ ಸೇವೆಯನು ಕೆಡಿಸಿದೆನೊ ! ಶಿವಪೂಜೆ
ಶಿವಧ್ಯಾನಗಳನಳಿದೆನೋ ! ಅಲ್ಲದೊಡೆನಗೆ
ಹೀನಕುಲ ಸಂಜಾತ ಶಬರನಿಂ ಪರಾಭವ
ವಾಗಲಹುದೇ ! ವಿಜಯಿ ನಾನಲ್ಲಿ ಜಗದೇಕ
ವೀರನಾನಲ್ಲ ಅಪಚಾರವೇನಾಯ್ತೊ ಹಾ !

ಸೌಮ್ಯ—ಮರುಗದಿರು ಧನಂಜಯ ಪರಶಿವನು ಕರುಣಾಳು !
ಶಿವಾಗಮ ಪ್ರೋಕ್ತವಿಧಿಯಿಂದ ನೀನರ್ಚಿಸುತ
ಮಳಲಲಿಂಗವನು ಭಕ್ತಿಯಿಂ ಶಿವಮಂತ್ರವನು
ಜಪಿಸುತಿರು ನಾನೆಸಗುವೆನು ನೇಮದಲಿ ಮಹಾ
ಮೃತ್ಯುಂಜಯ ಪೂಜೆಯನು ನಿನ್ನ ವಿಜಯಕೆಂದು !

ಅರ್ಜುನ—ಅಂತಾಗಲಿ ! ಅಂತಾಗಲಿ ಸೌಮ್ಯ ! ತೆರಳೋಣ !

(ತೆರೆ ಬೀಳುವುದು) (ನಿಷ್ಕ್ರಮಣ)

ಸೌಮ್ಯ—(ಮರಳಲಿಂಗದ ಮುಂದೆ ಪೂಜೆಗಾಗಿ ಅಣಿ ಮಾಡುತ್ತಿರುವನು)

ಅರ್ಜುನ—(ಪ್ರವೇಶಿಸಿ) (ಶಿವಲಿಂಗದ ಮುಂದೆ ಕುಳಿತು ಕೈಮುಗಿದುಕೊಂಡು)

ಅಸಮಾಕ್ಷ ದಕ್ಷಮುಖಶಿಕ್ಷ ಲೋಕಾಧ್ಯಕ್ಷ
ಜಯಿಸಿದನು ಶಬರನೆನ್ನನು ವೀರ ಯುದ್ಧದಲಿ
ನಾನವನ ಜಯಿಸಲೆನಗೆ ನೀಡೈಸತ್ತ್ವವನು !
ಹೇರಂಬ ಜನಕ ಜಯ ಜಯ ಕಾಲ ಕಾಲ ಶ್ರೀ
ನಾಗಭೂಷಣಸ್ವಾಮಿ ಪಾಲಿಸು ಕಿಂಕರನ !

(ಕೈಮುಗಿದು ಧ್ಯಾನಾಸಕ್ತನಾಗಿರುವನು)

ಸೌಮ್ಯ—ನಾಗೇಂದ್ರಹಾರಾಯ ಪುರಾಂತಕಾಯ ಸ್ಮರಾಂಗರಾಗಾಯ
ಮಹೇಶ್ವರಾಯ ದೇವಾದಿ ದೇವಾಯ ದಿಗಂಬರಾಯ
ತಸ್ಮೈನಕಾರಾಯ ನಮಶ್ಶಿವಾಯ
ಮತ್ತೇಭಚರ್ಮಾಂಬರ ಭೂಷಿತಾಯ ಸಮಸ್ತಗೀರ್ವಾಣ
ಗಣಾರ್ಚಿತಾಯ ತ್ರೈಲೋಕ್ಯನಾಥಾಯ ಸುರೇಶ್ವ
ರಾಯ ತಸ್ಮೈಮಕಾರಾಯ ನಮಶ್ಶಿವಾಯ
ಶಿವಾಯ ಗೌರೀವದನಾರವಿಂದ ಸೂರ್ಯಾಯದಕ್ಷಾ
ಧ್ವರನಾಶನಾಯ ಚಂದ್ರಾರ್ಕ ವೈಶ್ವಾನರ ಲೋಚನಾಯ
ತಸ್ಮೈ ಶಿ ಕಾರಾಯ ನಮಶ್ಶಿವಾಯ
ವಶಿಷ್ಠ ಕುಂಭೋದ್ಭವ ಗೌತಮಾದಿ ಮುನೀಂದ್ರ ವಂದ್ಯಾಯ
ಮುನೀಶ್ವರಾಯ ಶ್ರೀ ನೀಲಕಂಠಾಯ ವೃಷಧ್ವಜಾಯ
ತಸ್ಮೈವ ಕಾರಾಯ ನಮಶ್ಶಿವಾಯ
ಯಜ್ಞೇಶರೂಪಾಯ ಜಟಾಧರಾಯ ಪಿನಾಕಹಸ್ತಾಯ
ಜನಾಶ್ರಿತಾಯ ನಿತ್ಯಾಯ ಶುದ್ಧಾಯ ನಿರಂಜನಾಯ
ತಸ್ಮೈಯ ಕಾರಾಯ ನಮಶ್ಶಿವಾಯ

ಅರ್ಜುನ—ಸೇವಂತಿಕಾ ಬಕುಲ ಚಂಪಕ ಪಾಟಲಾಬ್ಜೈಃ
ಪುನ್ನಾಗಜಾಜೀ ಕರವೀರ ರಸಾಲಪುಷ್ಪೈಃ

ಬಿಲ್ವಪ್ರವಾಲ ಸುಶಮಿಾದಲ ಮಾಲಿಕಾಭಿಃ
ತ್ವಾಂಪೂಜಯಾಮಿ ಜಗದೀಶ್ವರ ಮೇ ಪ್ರಸೀದ
ತುರೀಯವನ ಸಂಭೂತಂ ನಾನಾಗುಣಸಮನ್ವಿತಂ
ಆನಂದಸೌರಭಂ ಪುಷ್ಪಂ ಗೃಹ್ಯತಾಮಿದಮುತ್ತಮಂ
ಶ್ರೀಸಾಂಬಾಯ ನಮಃ ನಾನಾವಿಧ ಪುಷ್ಪಾಣಿ ಸಮರ್ಪಯಾಮಿ

(ಕೈ ಮುಗಿಯವನು)
(ಎದ್ದು ಬಿಲ್ಲುಬಾಣಗಳನ್ನು ಹಿಡಿದು—ಮುಂದಡಿಯಿಟ್ಟು ನಿಂತು)

ಹೇ ! ಶಬರ ನಾಯಕನೆ ! ಶಿವಪೂಜೆಮುಗಿಸಿದೆನು
ಬಾರಿನ್ನು ಮುಗಿಸುವೆನು ನಿನ್ನ ಅವತಾರವನು
ಬಾಹುಯುದ್ಧದಲಿಂದು ನೆನೆದು ಬಾ ದೇವರನು !

ಶಬರ ಶಂಕರ—(ಪ್ರವೇಶಿಸುತ್ತ)

ಶ್ರೀಯೋಭಿವೃದ್ಧಿರಸ್ತು ! ಸಿದ್ಧಿಸಲಿ ವೀರಮುನಿ
ಪುಂಗವನೆ ! ಶಿವಪೂಜೆಯ ಮಹಾಸತ್ಫಲಂ !
ರಕ್ಷಿಸಲಿ ನವಯೋಧಮುನಿಯಂ ನಯನತ್ರಯಂ !

(ಎಂದು ಪ್ರವೇಶಿಸುವನು)

ಅರ್ಜುನ—(ದೃಷ್ಟಿಸಿ)

(ಸ್ವಗತಂ) ಏನಿದಾಶ್ಚರ್ಯಂ ! ಶಿವಶಿವಾ ! ಕಾಣುತಿದೆ
ಈ ಕಿರಾತನ ಮೇಗಡೆ ನವಸುಂದರ
ಕುಸುಮಚಯ ನಾನಾ ಪತ್ರತಮಾಲಪಲ್ಲವಂ !
ಅಲ್ಲಿ ಸೈಕತ ಲಿಂಗದೇವನ ಶಿರದಲ್ಲಿಟ್ಟ ಹೂವೆಲ್ಲ
ಇಲ್ಲಿ ಮೆರೆಯುತಿವೆ ಕೊರಳಲ್ಲಿ ಶ್ರೀ ಮಂದಾರ
ಮಾಲೆಯೊಪ್ಪುತಿದೆ ! ನನಗೇನು ಹಗಲುಕನಸೋ !
ಮತಿ ಭ್ರಾಂತಿಯೋ ! ನಾನರಿಯೆ ಶಿವಲೀಲೆಯನು !

ಕಿರಾತ—ಬೆಚ್ಚದಿರು ಬೆದರದಿರು ಕಲಿಪಾರ್ಥ ಮನದಲ್ಲಿ
ಕಿರಾತರುದ್ರಲೀಲಾ ರಂಗದಲಿ ಶ್ರೀಗೌರಿ

 

ಗಣಪ ಷಣ್ಮುಖ ಪ್ರಮಥಗಣವೆಲ್ಲ ಓಲೈಸಿ
ಬಂದಿಹುದು ಕಾಡುಬೇಡರ ರೂಪಿನಲಿ ನೋಡು !

(ಶಿವ ಪಾರ್ವತಿಯರು ಪ್ರತ್ಯಕ್ಷವಾಗುವರು)

ಅರ್ಜುನ—
(ಚಂಪಕ) ಜಯ ಜಗದೀಶ ದೇವಜಯ ಚಿನ್ಮಯರೂಪ ಜಯಾದ್ರಿಜಾಕುಚ
ದ್ವಯ ಹರಿ ಚಂದನಾಂಕ ಜಯ ನಿರ್ಜಿತ ಪಾಶಜಯಾಗಮಾಂತಸಂ
ಚಯನುತ ಪಾದಪದ್ಮಜಯ ಭೂಧರ ಧನ್ವಜಯಾಶ್ರಯಾಸಂ
ಶ್ರಯ ನಿಜಫಾಲನೇತ್ರಜಯ ನಿರ್ಜರಪೂಜ್ಯಜಯಾಂತಕಾಂತಕಾ ||

(ಕಂದ) ಪುಟ್ಟಿಂದು ಸಫಲಮಾದುದು
ನೆಟ್ಟನೆ ಮದ್ವಂಶ ಕುಸುಮಮುಲದ್ರ್ಯದು ಪೆರತೇಂ
ಮುಟ್ಟದೆ ನತಿಶಯಪದವಿಯ
ಬಟ್ಟೆಯನೆಲೆ ದೇವದೇವ ನೀನೊಲ್ದುದರಿಂ ||

ಅಜ್ಞಾನ ಮೋಹಮದ ಮಾತ್ಸರ್ಯ ಹೃದಯನಂ
ತವಪಾದ ಭಕ್ತನಂ ಕರುಣಿಸೈ ! ಬೇಡುವೆನು
ಅಪರಾಧ ಕೋಟಿಯಂ ಮನ್ನಿಸೈ ಮಹದೇವ

(ದೀರ್ಘ ದಂಡ ಪ್ರಣಾಮ ಮಾಡುವನು)

ಶಂಕರ—(ಹಿಡಿದೆತ್ತಿ ಮೈದಡವಿ)

ಮರುಗದಿರು ಕಲಿಪಾರ್ಥ ! ನೀನೆಂದ ಕಟೂಕ್ತಿ
ಯೆನಗೆ ಮಂತ್ರಂ ! ಎಚ್ಚಶರಾವಳಿ ಭಾವಿಸಲು
ಪುಷ್ಪಾರ್ಪಣಂ ನಿನ್ನ ರೋಷ ವೀಕ್ಷಣೆಯೆನಗೆ
ದೀಪಾವಳಿ ಬೆಳಗಿದಂತೆ ! ನಿನ್ನ ಧನುರ್ಲತಾ
ಹತಿಯು ಬಾಸುಳೆಯೆನಗೆ ಹೂಮಾಲೆಯಂತಾಯ್ತು
ನಿನ್ನಯಾ ಮುಷ್ಟಿಯುದ್ಧಮದು ಮತ್ಪದ ಪೂಜೆ
ಯಂತಾಯ್ತು ! ನಿನ್ನ ಭೀಷ್ಮಮೇಂ ತಿಳಿಸು ಪಾರ್ಥಾ !
ಸುಲಿಸುವೆನು ಶ್ರೀಗೌರಿ ಹರಸುವಳು ಪ್ರೇಮದಲಿ

**ಅರ್ಜುನ**—ಕರುಣಿಸೈ ದೇವಾದಿದೇವ ಮೃತ್ಯುಂಜಯನೆ !
ದಿವ್ಯ ಪಾಶುಪತಾಸ್ತ್ರಮಂ ವೈರಿಗಡಣಮಂ
ಸಂಹರಿಸಲೆನಗೆ ಸಮರಮುಖದಲಿ ಜಗನ್ಮಾತೆ !
ಬೇಡುವೆನು ನಿನ್ನೊಂದು ಶಕ್ತ್ಯಸ್ತ್ರಮಂದೇವಿ !
ಕರುಣಿಸು ತಪ್ಪೆನ್ನದು ಕ್ಷಮೆ ನಿನ್ನದು ತಾಯಿ !

**ಶಂಕರ**—(ಪಾಶುಪತಾಸ್ತ್ರವನ್ನು ನೀಡಿ)
ವಿಜಯಿಾಭವ ಫಲ್ಗುಣ ! ಸಿದ್ಧಿಸಿತು ತಪಃಫಲಂ

**ಗೌರೀ**—ನೀಡುವೆನು ಲೋಕೈಕ ದಿವ್ಯಾಂಜನಾಸ್ತ್ರಮಂ
ವೈರಿವಿಚ್ಛೇದನೋಚಿತ ಮಹಾಬಾಣಮಂ !
ಧನಂಜಯ ! ಸಮರದಲಿ ಸಿದ್ಧಿಸಲಿ ತಪಃಫಲಂ !

**ಅರ್ಜುನ**—(ದೀರ್ಘದಂಡ ನಮಸ್ಕಾರ ಮಾಡಿ)
" ಜಗತಃ ಪಿತರೌವಂದೇ ಪಾರ್ವತೀ ಪರಮೇಶ್ವರೌ "

**ಸೌಮ್ಯ**—(ವನವೇಣಿಯೊಂದಿಗೆ ಪ್ರವೇಶಿಸಿ)
ಜಯಮಸ್ತು ಪಾರ್ಥಂಗೆ ! ನಮೋನ್ನಮಃ ಭೂತೇಶ !
ಜಯಜಯಂ ಜಗನ್ಮಾತೆ ಶಂಭುಶಂಕರ ಪ್ರೀತೆ !

**ಅರ್ಜುನ**—ಧೌಮ್ಯರ್ಷಿ ಶಿಷ್ಯ ನೀ ಸೌಮ್ಯಗುಣನಿಹನೆನ್ನ
ಸೇವೆಯಲಿ ಈ ಶಬರಿ ನವತರುಣಿ ವನವೇಣಿ
ಒಲಿದಿಹಳು ಸೌಮ್ಯನನು ಪ್ರೇಮದಲಿ ಮಹದೇವ !
ಈ ಭೂಸುರ–ಶಬರಿಯರನು ಹರಸಿ ರಕ್ಷಿಸುವುದು
ದಾಂಪತ್ಯ ಜೀವನ ಸಂಯೋಗದಲಿ ನಲಿವಂತೆ !

**ಶಿವ-ಗೌರೀ**—ವರ್ಧಿಸಲಿ ಆದರ್ಶ ದಾಂಪತ್ಯ ಜೀವನಂ !
ಲೋಕಾಸ್ಸಮಸ್ತಾ ಸುಖಿನೋಭವಂತು !

ದೇವಗಣ—(ತೆರೆಯಲ್ಲಿ)

ಜಯಜಯಂ ! ಉಘೇ ಉಘೆ ! ಸದಾಶಾಂತಿರ್ಭವತು

ಚಿತ್ರಚೂಡ
ಪುಷ್ಪರಥ } (ಪ್ರವೇಶಿಸಿ ಸಾಷ್ಟಾಂಗಪ್ರಣಾಮ ಮಾಡುವರು)

"ನಮಶ್ಶಿವಾಯ ಶಾಂತಾಯ ನಮಸ್ಸೋಮಾಯ ಶಂಭವೇ !
ನಮಶ್ಶಿವಾಯ ಕಲ್ಯಾಣೇ ಪತಯೇ ತೇನಮೋ ನಮಃ
ಶುಭಂ ಭೂಯಾತ್

(ತೆರೆ ಬೀಳುವುದು)

## ತೃತೀಯಾಂಕ

### ದೃಶ್ಯ ೧

(ತೆರೆಯ ಹಿಂದೆ)

(ಉಷಃಕಾಲ. ಮಂದಾನಿಲ ಬೀಸುತ್ತಿದೆ. ಪಕ್ಷಿಗಣ ಚಿಲಿಪಿಲಿಗುಟ್ಟುತ್ತಿದೆ. ಚಿತ್ರಚೂಡ, ಪುಷ್ಪರಥ ಇಬ್ಬರೂ ಶುಚಿರ್ಭೂತರಾಗಿ ಆಶ್ರಮಪ್ರಾಂತದಲ್ಲಿ ಬರುತ್ತಿದ್ದಾರೆ. ಕ್ರಮೇಣ ಎಳೆಬಿಸಿಲು ಗಿರಿವನರಾಜಿಯ ಮೇಲೆ ರಾರಾಜಿಸುತ್ತದೆ. ವಟುಗಣ ಅಲ್ಲಲ್ಲಿ ಸುಳಿದಾಡುತ್ತಿದ್ದಾರೆ.)

(ತೆರೆ ಏಳುವುದು)

ಚಿತ್ರಚೂಡ
ಪುಷ್ಪರಥ } (ಇಬ್ಬರೂ ಪ್ರವೇಶಿಸುತ್ತ)

"ನಮಶ್ಶಿವಾಭ್ಯಾಂಕಲಿನಾಶಕಾಭ್ಯಾಂ ಕಂಕಾಲಕಲ್ಯಾಣವಪುರ್ಧರಾಭ್ಯಾಂ
ಕೈಲಾಸಶೈಲಸ್ಥಿತ ದೇವತಾಭ್ಯಾಂ ನಮೋನಮಶ್ಶಂಕರ ಪಾರ್ವತೀಭ್ಯಾಂ

(ಎಂದು ಪ್ರಾರ್ಥನೆಮಾಡುವರು)

ಚಿತ್ರಚೂಡ—ನೋಡಲ್ಲಿ ಪುಷ್ಪರಥ ! ಹಿಮಗಿರಿಯ ತಪ್ಪಲಲಿ
ಕಾಂಬುವಳು ಮಾತಾಯಿ ಮಂದಾಕಿನೀದೇವಿ
ನಗುನಗುತ ಧಾವಿಪಳು ಗಂಭೀರ ಭಾವದಲಿ
ಕರ್ಮಯೋಗಿಣಿಯಂತೆ ಲೋಕವನು ತಣಿಸುತ್ತ
ಸುತ್ತೆಲ್ಲ ಪ್ರಕೃತಿದೇವಿ ನಲಿಯುವಳು ನೋಡು !
ಕಲಕಂಠ ಮಾಧುರ್ಯ ಗಾನದಲಿ ಹಾಡುವಳು
ವನರಾಣಿ ಕೋಗಿಲೆಯ ಸವಿಗೊರಲ ದನಿಯಲ್ಲಿ
"ತೆರೆತೆರೆಯ ನಡುನಡುವೆ ಬಿದ್ದೆದ್ದು ಬರಲಾರ
ದಿದ್ರೋಡಂ" ತಂಗಾಳಿ ಸುಳಿಯುತ್ತ ಬನದಲ್ಲಿ
ಬೀರುತಿದೆ ಬಿರಿಮುಗುಳ ಪರಿಮಳವನೆಲ್ಲೆಲ್ಲು
ಎರಗುತಿರೆ ಭರದಲ್ಲಿ ಮರಿದುಂಬಿ ಝೇಂಕರಿಸಿ !

ಪುಷ್ಪ—ಉದಯಗಿರಿಯುತ್ತುಂಗ ಶಿಖರದಲಿ ಮೆರೆಯುತಿದೆ
ಅನುರಾಗರಸದಂತೆ ತಪ್ತಕನಕವರ್ಣದ
ಛಾಯೆ ! ಲಾಸ್ಯನೃತ್ಯದಲಿ ಧರೆಗಿಳಿಯು ಬರುತಿರ್ಪ
ಉಷಾದೇವಿಯನುಹರಿಸಿ ಸಗ್ಗಿಗರು ಚೆಲ್ಲಿರುವ
ದಿವಿಜ ಮಲ್ಲಿಗೆಯ ರೀತಿಯಲಿ ಕಾಣುತಿವೆ
ಅಲ್ಲಲ್ಲಿ ತಾರೆಗಳು ದಿವಿಜ ಪಥದಲ್ಲಿ !

ಚಿತ್ರ—ಗಜಗಮನೆ ಗಂಗೆಯಲಿ ಗಜವೃಂದ ಜಲಕೇಳಿ
ಯಾಡುತಿದೆ ನೋಡಲ್ಲಿ ಚಿತ್ರಚೂಡ ದೂರದಲಿ.

ಪುಷ್ಪ—ಮಂಜುಮಣಿ ಹಾರವನು ಧರಿಸಿಹಳು ವನಲಕ್ಷ್ಮಿ !

ಚಿತ್ರ—ಅರಳಿರುವ ಹೂಗಳಲಿ ನಗುತಿಹಳು ವನದೇವಿ !

ಪುಷ್ಪ—ಕೌಶೇಯ ವಸ್ತ್ರವನು ಧರಿಸಿ ನಿಂತಂತಿಹುದು
ಭೂಧರ ಶ್ರೇಣಿ ಎಲ್ಲೆಲ್ಲು ಅರ್ಘ್ಯವನೀವ
ಭೂಸುರರ ಗಣದಂತೆ ಉದಯ ರವಿಯೆದುರಿನಲಿ

ಚಿತ್ರ—ಮಂಗಳದ ಗೀತೆಯನು ಹಾಡುವುದು ಪಕ್ಷಿಗಣ
ಚಿರಶಾಂತಿ ಮಂತ್ರವನು ನುಡಿವ ಯೋಗಿಗಳಂತೆ !

ಪುಷ್ಪ—ತರುರಾಜಿ ನಿಂತಿಹುದು ಮೌನದಲಿ ತಾಪಸಿಯು
ಭಾವದಲಿ ನದಿಯ ಕಲಕಲ ದನಿಯನಾಲಿಸುತ
ಜೋಗುಳವ ಕೇಳಿ ಮೈಮರೆವ ಹಸು ಕಂದನಾ
ನಂದದಲಿ

ಚಿತ್ರ— ಅಭಿಮಾನ ತೊರೆದಿರುವ ಸಂನ್ಯಾಸಿ
ಯಂದದಲಿ ! ಪರಮಾತ್ಮ ತತ್ತ್ವನುಸಂಧಾನಿ
ಸಾಧಕನ ಮಾಳ್ಕೆಯಲಿ ಕಾಂಬುವುದು ತರುವೃಂದ.

ಪುಷ್ಪ—ಅಲ್ಲದೆಯೆ, ಭಾವಿಸಲು ಮನದಲ್ಲಿ ಚಿತ್ರಚೂಡ !
ಶಿವಪೂಜೆ ಗೃಹದಲ್ಲಿ ಪಂಚಾಕ್ಷರೀ ಮಂತ್ರ
ಜಪದಲ್ಲಿ ಕುಳಿತಿರುವ ಜಂಗಮರ ರೀತಿಯಲಿ
ತರುವೃಂದ ಕಾಣುತಿದೆ ಶ್ರೀನದಿಯ ತೀರದಲಿ !

ಚಿತ್ರ—ಅರುಣವರ್ಣದ ಛಾಯೆ ಕಂಗೊಳಿಸೆ ಪೂರ್ವಾದ್ರಿ
ಕಾಂಬುವುದು ಕಾವಿಯನು ಧರಿಸಿರುವ ಜಂಗಮನ
ರೂಪದಲಿ ! ಅಚಲತೆಯ ಬಿಟ್ಟು ಜಂಗಮವಾಯ್ತು
ಉದಯಾದ್ರಿ !

ಪುಷ್ಪ— ದಿನಕರನೆ ಜಗದೇಕ ಜಂಗಮನು ।
ಲೋಕಹಿತ ಸಾಧನೆಯ ರೂಪದಲಿ ಸಾರುವನು
ನಿಷ್ಕಾಮ ಕರ್ಮವನು ಜಗದಲ್ಲಿ ! ಬೀರುವನು
ಬೆಳಕನ್ನು ಕತ್ತಲೆಯ ಮನದಲ್ಲಿ ಯೋಗಿಯಂತೆ !

ಚಿತ್ರ—ಉಷಾದೇವೀಯೋಗಿಣಿಯ ತಪೋವನದಂತೆ
ಕಾಣುತಿದೆ ಕಾಂತಾರ ಸೌಂದರ್ಯ ಶೋಭಿಸಲು
ಚಿರಶಾಂತಿ ನೆಲೆಸಿರಲು ಎಲ್ಲೆಲ್ಲು, ಪುಷ್ಪರಥ !

ಪುಷ್ಪ—ಈ ಎಡೆಯೆ ಅರ್ಜುನನ ತಪೋವನವೆನಿಸಿತ್ತು !
ಇದು ಕೈವಲ್ಯ ಧಾಮ ! ಋಷಿತ್ರಿದಶಾಲಯಂ !

ಚಿತ್ರ—ಬೆಳಗಾಯ್ತು ಬೆಳಗಾಯ್ತು ! ಹೊಗಂಪು ಬೀರುತಿರೆ
ವನಲತಾವನಿತೆಯರು ಬಳುಕುತ್ತ ಬಾಗುತ್ತ
ನಿಂತಿಹರು ಕುಸುಮಾಂಜಲಿಯ ನೀಡೆ ಭರದಲ್ಲಿ
ಅರ್ಜುನನ ಸುರಲೋಕ ನಿರ್ಗಮನ ಸಮಯದಲಿ
ಮುಗುಳುನಗೆ ಸೂಸುತ್ತ ಮನೋಮರಾಗದಲಿ.

ಪುಷ್ಪ—(ಕೈಮುಗಿದು)
ಸ್ವರ್ಗಸುಂದರಿ ಬಾರೆ ! ಬಾ ! ಬಾರೆ ! ಉಷಾಂಬೆ !

ದಿನಮಣಿಯು ಸೀಮಂತಮಣಿಯಂತೆ ಒಪ್ಪಿರಲು
ಮಂಜು ಸೀರೆಯನು ಚಿಮ್ಮುತ್ತ ಮುಂಗಾಲು ತುದಿ
ಯಲ್ಲಿ ಗಿರಿಯಿಂದ ಗಿರಿಹಾಯ್ದು ನದಿಯಿಂದ ನದಿ
ಹಾಯ್ದು ವನದಿಂದ ವನಹಾಯ್ದು ಸ್ವರ್ಗ ಜೀವನ
ಕಾಂತಿಯನು ಬೀರುತ್ತ ಧರೆಯಲ್ಲಿ ಹರಸೆಮ್ಮ
ದೇವೇಂದ್ರ ವರತನಯ ವಿಕ್ರಮಾರ್ಜುನ ದೇವನಂ !

ಚಿತ್ರ—ತಪಃಕ್ಲೇಶದಿಂ ನೊಂದಿಹನು ಪಾರ್ಥನೆಂದೇ
ದೇವೇಂದ್ರನಿತ್ತಿಹನು ಆಹ್ವಾನವನು ತಾನು
ಶಿವಪ್ರಸಾದ ಸಂತೃಪ್ತ ಪಾಂಡು ಕುಮಾರಂಗೆ !

ಪುಷ್ಪ—ಇದನೆಲ್ಲ ಮೊದಲೆ ದೇವೇಂದ್ರ ನಮಗಂದು ತಿಳಿ
ಸಿದ್ದನಲ್ಲವೇ ? ತಪಃಫಲ ಸಿದ್ಧಿಸಿಹುದಿಂದು !

ಚಿತ್ರ—ಸಿದ್ಧಿಸಿತು, ಸಿದ್ಧಿಸಿತು ! ಆದರೇಂ ! ಸಂಪೂರ್ಣ
ಸಿದ್ಧಿಯಲಿ ಫಲವುಂಟು ! ದೇವಲೋಕದಲ್ಲಿದ್ದು
ಸಕಲದೇವ ಗಣದಾಶೀರ್ವಾದವನಾಂತು
ವನವಾಸದಲಿರ್ಪ ಸಹೋದರರ ಗೋಷ್ಠಿಯಂ
ಸೇರಿ ರಣಭೂಮಿಯಲಿ ವೈರಿಗಳ ತರಿದಂದು
ವರ ಪಾಶುಪತಾಸ್ತ್ರದಲಿ ಶಿವನ ಕೃಪೆ ತುಂಬಿರಲು
ತಪಃಫಲ ಸಂಸಿದ್ಧಿಯಾದಂತೆ, ಪುಷ್ಪರಥ !

ಪುಷ್ಪ—ನಿಶ್ಚಯಂ ! ಗೀರ್ವಾಣ ರಥವೇಕೋ ಬರಲಿಲ್ಲ
ದೇವೇಂದ್ರನಾಣತಿಯನಾಂತು ಸಡಗರದಲ್ಲಿ !

ಚಿತ್ರ—(ಮುಂದೆ ನೋಡಿ)
ಪುಷ್ಪರಥ ! ನೋಡಲ್ಲಿ ದಿವಿಜರಥ ಬರುತಿಹುದು
ಗಗನ ಪಥದಲ್ಲಿ ಮಿಂಚು ಹೊಳೆವಂತೆ ಚಣದಲಿ !

ಪುಷ್ಪ—ಅಹುದಹುದು ! ನಾವಿನ್ನು ತೆರಳೋಣ ಚಿತ್ರಚೂಡ !
ನಲಿಯೋಣ ಅಮರಾವತಿಯ ಸಂಭ್ರಮದಲಿನ್ನು

ಚಿತ್ರ—ತಥಾಸ್ತು ! ನಿಂತಿಹನು ನೋಡಲ್ಲಿ ಮಾತಲಿಯು
ರಥವಿಳಿದು ಬಿಲ್ವವೃಕ್ಷದಡಿಯಲಿ ದಿಟ್ಟಿಸುತ
ಋಷ್ಯಾಶ್ರಮಗಳತ್ತ ಸುತ್ತೆಲ್ಲ ತವಕದಲಿ !

(ತೆರೆ ಬೀಳುವುದು)

(ಇಬ್ಬರೂ ತೆರಳುವರು)

## ದೃಶ್ಯ ೨

(ಅರ್ಜುನನ ಪರ್ಣ ಕುಟೀರ. ಪ್ರಯಾಣಸನ್ನದ್ಧನಾಗಿ ದೇವದಾರು ವೃಕ್ಷದ ಬಳಿಯಲ್ಲಿ ನಿಂತು ಏನನ್ನೋ ಆಲಿಸುವಂತೆ ಎಡಗಡೆ ನೋಡುವನು)

ಸೌಮ್ಯ—(ತೆರೆಯಲ್ಲಿ)
ಭಾವಿಸಲು "ತೇನವಿನಾ ತೃಣಮಪಿ ನ ಚಲತಿ"
ಎಂದೆಂಬ ಉಪನಿಷದ್ಘೋಷಣೆಯು ಸಟೆಯಲ್ಲ
ಪರಶಿವನ ಕೃಪೆಯಿರಲು ಯಾರಿಂದಲೇನಹುದು !
ಯಾರೇನು ಮಾಡುವರು ? ಸಿದ್ಧಿಸಿತು ತಪಃಫಲ
ಪಾರ್ಥಂಗೆ ಶಂಕರನ ಕೃಪೆಯಿಂದ ! ಸಮ ಬಲರು
ಇನ್ನುಂಟೆ ! (ಪ್ರವೇಶಿಸುವನು)
ಇತ್ತಬಾ ! ಮಾತಲಿಯೆ ! ನೋಡಿಲ್ಲಿ
ಇದುವೆ ವಿಕ್ರಮಾರ್ಜುನನ ಎಲೆವನೆಯು ; ಇಲ್ಲಿಯೇ
ನಿಂತಿಹನು ಕಲಿಪಾರ್ಥ !
(ಆ ಕಡೆ ತಿರುಗಿ) ಶುಭಮಸ್ತು ದೇವಂಗೆ !
ಸುರಲೋಕ ಸಾರಥಿಯು ಮಾತಲಿಯು ಬಂದಿಹನು !

ಮಾತಲಿ—(ಪ್ರವೇಶಿಸಿ)
ಶುಭಮಕ್ಕೆ ದೇವೇಂದ್ರ ವರಜಾತ ಪಾರ್ಥಂಗೆ !

ಅರ್ಜುನ—ಧನ್ಯೋಽಸ್ಮಿ ಮಾತಲಿಯೆ, ಕನಸೆಲ್ಲ ನನಸಾಯ್ತು !
ಮಹೇಂದ್ರನಿರುವನೆ ಸುಕ್ಷೇಮದಲಿ ನಿರ್ಜರರ
ಲೋಕದಲಿ !

 

ಸೌಮ್ಯ— ನೀಕಂಡ ಕನಸೇನು ಧನಂಜಯ ?

ಅರ್ಜುನ—ದಿವ್ಯರಥದಲಿ ಕುಳಿತು ಹೊರಟಿದ್ದೆ ವಿಷ್ಣುಪದ
ಮಾರ್ಗದಲಿ ಸುರರೆಲ್ಲ ನೆರೆದಿರಲು ನೋಡುತ್ತ
ದೇವೇಂದ್ರನಮರಾವತಿಯ ದಿಕ್ಕಿನಲಿ ನಾನು
ಅಮರೇಶನಾಣತಿಯ ನೆನಪಿನಲಿ ಕಳೆದಿರುಳು.

ಸೌಮ್ಯ—ಶುಭೋದಯಮಾಯ್ತು ! ಪುಣ್ಯಸಂಸಿದ್ಧಿಯಾಯ್ತು !

ಅರ್ಜುನ—ಇಲ್ಲಿ ಋಷಿವೃಂದದಲಿ ಕಳೆದಾಯ್ತು ಹನ್ನೆರಡು
ಮಾಸಪರ್ಯಂತ ಶಿವನ ಧ್ಯಾನದಲಿ ಸದಾ !
ಅಕ್ಕರೆಯ ಜಿಂಕೆಗಳು ಮಲ್ಲಿಗೆಯ ಬಳ್ಳಿಗಳು
ನೀರಿತ್ತ ಹಳ್ಳಗಳು ನೆರಳಿತ್ತ ವೃಕ್ಷಗಳು
ಹಾಲಿತ್ತ ಗೋವುಗಳು ಎನಿತೊಂದು ಹಿತವೆನಿಸಿ
ಬಾಳಿದುವು ನನ್ನೊಡನೆ ಕಾಡಿನಲಿ ದಿನದಿನವು.
ಈ ತಪೋನಿಧಿಗಳೆತ್ತ ! ವಟುಗಣವೆತ್ತ ! ಖಗ
ಮೃಗಸಂಕುಲವೆತ್ತ ! ಇದಕಿಂತ ಮಿಗಿಲುಂಟೆ !
ಪರಲೋಕ ಸುಖವೆತ್ತ ! ನಾನೆತ್ತ ! ಸುರರೆತ್ತ !
ಯಾವ ಸುಖವಿನ್ನೇಕೆ ! ತಾಪಸಿಯ ಸುಖವಿರಲು !
ಗೀರ್ವಾಣ ಸಾಮ್ರಾಜ್ಯ ವೈಭವದ ಸುಖವೇಕೆ !
ಚರ್ಮಾಕ್ಷಿಯಲಿ ಹರನ ಕಂಡಾಯ್ತು ಧನ್ಯತೆಯ
ಪಡೆದಾಯ್ತು ! ದೇವಲೋಕದಗೊಡವೆ ಇನ್ನೇಕೆ !

ಮಾತಲಿ—ಏನನಾಡಿದೆ ಪಾರ್ಥ ! ಬಿಟ್ಟುಬಿಡು ದುಗುಡವನು.
ಜಾತಿ ಕ್ಷತ್ರಿಯ ನೀನು, ರಣಹೇಡಿ ನೀನಲ್ಲ
ಪಾಂಡುಪುತ್ರರು ಸೋದರರು ದ್ರೌಪದಿಯು ಸಂಗಡ
ಇಹರು ಕಾಡಿನಲಿ ಕೌರವರ ಹಗೆತನದಲ್ಲಿ
ಮರೆತೆಯಾ ನಿಮಗಾದ ಪರಿಭವವ ! ಸಾಕಿನ್ನು
ದೈನ್ಯತೆಯು. ನಿಲ್ಲು ಕ್ಷಾತ್ರತೇಜೋಭಾವದಲಿ

ರಥವೇರು ಕಲಿಪಾರ್ಥ ! ದೇವೇಂದ್ರ ಕಾದಿಹನು
ದೇವಗಣವೆಲ್ಲ ಕಾಯುತಿರೆ ಅಷ್ಟದಿಕ್ಪಾ
ಲಕರಿಹರು ನಿನ್ನಾಗಮನ ಸುಮುಹೂರ್ತವಲ್ಲಿಯೆ !

ಸೌಮ್ಯ—ಅಭ್ಯಾಸ ಬಲದಿಂದ ತೂಣೀರವಾಯಿತ್ತು
ದರ್ಭಾಸನಂ ವೀರ ಘೋಷಣೆಯಾಯಿತ್ತು
ಶಾಂತಿಮಂತ್ರಂ ! ಋಷಿಗಣದ ಸಾಹಚರ್ಯದಲಿ !

ಮಾತಲಿ—ತೆರಳಿನ್ನು ಕಲಿಪಾರ್ಥ ! ದೌರ್ಬಲ್ಯ ಸರಿಯಲ್ಲ.

ಸೌಮ್ಯ—ಗಿರಿಧೈರ್ಯ ನಿನಗಿರಲಿ, ಸಾಮರ್ಥ್ಯ ತುಂಬಿರಲಿ
ತಡವೇಕೆ ! ನಡೆಮುಂದೆ, ನಿಲ್ಲದಿರು ಸಗ್ಗದಲಿ
ಬಹುಕಾಲ ದಿವಿಜ ಸಂಪರ್ಕದಲಿ. ಕಲಿತು ಬಾ
ದಿವ್ಯಾಸ್ತ್ರ ಮಂತ್ರಗಳ ತಪಃಫಲ ಪರಿಪೂರ್ಣ
ಸಾಧನೆಯ ಮಾರ್ಗದಲಿ ಕೃತಕೃತ್ಯನೀನಾಗು !
ಇಲ್ಲದಿರೆ, ತಾ ಇಲ್ಲಿ, ಶಿವಪಾಶುಪತಾಸ್ತ್ರವ !
ಸುಟ್ಟುರುಹುವೆನು ಕೌರವರ ಸೇನೆಯನೆಲ್ಲ.
ತೋರುವೆನು ಬ್ರಾಹ್ಮಣ ತೇಜೋಬಲವನಿಲ್ಲಿ !

ಅರ್ಜುನ—ಲೇಸನಾಡಿದೆ ಸೌಮ್ಯ ! ಮಾತಲಿಯ ಮಾತಿನಲಿ
ರಾಜಧರ್ಮ ತುಳುಕಿದರೆ ನಿನ್ನ ಮಾತಿನಲಿ
ಆತ್ಮಧರ್ಮ ತುಂಬಿಹುದು ಶಿವನಿಷ್ಟೆಯಂತಿರೆ
ಹೋಗಿಬರುವೆನು ನಾನು ಮಾತಲಿಯ ಜೊತೆಯಲ್ಲಿ
ಹಿಂತಿರುಗು ನೀನು ! ವನವೇಣಿ ಸಹಿತ ಬೇಗದಿ
ಕಾಮ್ಯಕವನದತ್ತ ನನಗಾಗಿಯೆ ಕಾದಿಹರು
ಸೋದರರು ಬಿನ್ನವಿಸು ಧರ್ಮಜಗೆ ವಿನಯದಲಿ
ಅರ್ಜುನನ ಅನಂತಾನಂತ ವೀರಪ್ರಣಾಮ
ಕಾಣಿಕೆಯ ! ದ್ರೌಪದಿಗೆ ತಿಳಿಸೆನ್ನ ಅಭಯವನು !

ಸೌಮ್ಯ—ಕೃತಾರ್ಥೋಽಸ್ಮಿಪಾರ್ಥ ! ಶುಭವಸ್ತು ನಾಕದಲಿ.
ಭೂಸ್ವರ್ಗಬಾಂಧವ್ಯ ವರ್ಧಿಸಲಿ ಸಂತತಂ

(ನಿಷ್ಕ್ರಮಣ)

ಅರ್ಜುನ—(ಮಾತಲಿಯತ್ತ ತಿರುಗಿ)
ಮಾತಲಿಯೆ ಪಯಣವೆಷ್ಟಿಹುದು ನಮ್ಮ ದಾರಿಯಲಿ !
ನಾನೆಂದು ದೇವಲೋಕದ ಮಾರ್ಗದಲಿ ಯಾನ
ಮಾಡಿಲ್ಲ ! ಭೂಗಗನ ದೃಶ್ಯವೆಂತಿರ್ಪುದೋ !

ಮಾತಲಿ—ಅದ್ಭುತಂ ! ಭೂಲೋಕದಿಂದತ್ತ ಎತ್ತರಕೆ
ಸಾಗಿದಂತೆ ಲೋಕಾಕಾಶ ಮುಗಿದು ಬರುತಿರೆ
ಸೇರುವೆವು ಅಲೋಕಾಕಾಶವನು, ಧನಂಜಯ !
ಆ ದೃಶ್ಯವನು ವರ್ಣಿಸಳವಲ್ಲ ! ಅನುಭವಿಸಿ
ಆನಂದ ಮಗ್ನರಾಗಲೇಬೇಕು ಮಾನವರು

ಅರ್ಜುನ—(ಸುತ್ತಲೂ ನೋಡುತ್ತ)
ವಂದಿಸೆನು ವನದೇವಿಯರೆ ! ಇಂದ್ರಕೀಲ ಗಿರಿ
ಬಂಧುವೇ ! ಆಶ್ರಮಗಳೆ, ಪಂಕಜಶ್ರೇಣಿಯೇ
ತರುಲತೆ ಖಗಮೃಗ ವನಚರವೆ ಗುಲ್ಮಾವಳಿಯೆ
ಹೋಗಿ ಬರುವೆನು ನಿಮ್ಮನುಜ್ಞೆಯಲಿ ನಾನೀಗ
ಮರೆಯದಿರಿ ಸಖ್ಯವನು ಮನ್ನಿಸಿರಿ ಪ್ರೀತಿಯಲಿ
ತಪ್ಪನೇಗೈದಿಹೆನೊ ರಜೋಗುಣ ಭಾವದಲಿ
(ಕೈಮುಗಿದು ಅನಂತರ ಮಾತಲಿಯತ್ತ ತಿರುಗಿ)
ನಾವಿನ್ನು ತೆರಳೋಣ, ಮಾತಲಿಯೆ, ತಡವೇಕೆ ?
ದಿವಿಜಪಥದಲಿ ಕಾಣ್ಬ ದೃಶ್ಯಗಳ ಬಿತ್ತರಿಸು
ಮರೆಯದಿರು ; ನನ್ನ ಮನ ಓಡುತಿದೆ ಆಗಲೇ
ನಾಕಸೋಪಾನದಲಿ ಮನೋರಥವೇರಥ !
ದಿವಿಜ ರಥವಿನ್ನೇಕೆ ನಿಶ್ಚಯಂ ಭಾವಿಸಲು

(ತೆರೆ ಬೀಳುವುದು) (ನಿಷ್ಕ್ರಮಣ)

## ದೃಶ್ಯ ೩

(ತೆರೆಯ ಮುಂದುಗಡೆಯಲ್ಲಿ)

ಚಿತ್ರಚೂಡ—(ಪ್ರವೇಶಿಸಿ)
ಪುಷ್ಪರಥ, ನೋಡಲ್ಲಿ ಕಾಣುವುದೆ ? ಆಕಾಶ
ಮಾರ್ಗದಲಿ ದಿವಿಜರಥ ಚಲಿಸುತಿದೆ ಮೇಘಗಳ
ಜಾಲವನು ಚದುರಿಸುತ ದಿಕ್ಕುದಿಕ್ಕಿಗೆ ಮಹಾ
ವೇಗದಲಿ ವೈನತೇಯನ ರೀತಿಯಲಿ ಪೂರ್ವ
ದಿಗ್ಭಾಗದಲಿ ಅಮರನಗರಾಭಿಮುಖದಲ್ಲಿ
ಥಳಥಳನೆ ಹೊಳೆಯುತ್ತ ಮಾರ್ತಾಂಡ ಕಾಂತಿಯಲಿ

ಪುಷ್ಪರಥ—ದೇವರಥಚೀತ್ಕಾರ ಕೇಳುತಿದೆ ತೇಜಿಗಳ
ಹೇಷಾರವದಲಿ ಮೇಣ್ ವರೂಥ ಧ್ವಜವಾಡು
ತಿದೆ ಮೇಲೆ ದೇವೇಂದ್ರ ತನುಜಾತ ಮುಂಡಿಸಿಹ
ನೆಂದೆಂಬ ಹೆಮ್ಮೆಯಲಿ ; ಸಗ್ಗಿಗರ ತೇರನೆತ್ತಿ
ಯಲಿತಾ ಮೆರೆವೆನೆಂದೆಂಬ ಸಂಭ್ರಮದಲ್ಲಿ !
ಚಲಿಸುತಿದೆ ನಿರ್ಜರರಥ ವಿದ್ಯುದ್ವೇಗದಲಿ
ಮುನಿಜನರು ಬೆರಗಿನಲಿ ಕತ್ತೆತ್ತಿ ನೋಡುತ್ತ
ನಿಂತಿಹರು ನಿಂತಲ್ಲಿ ಆಶ್ರಮಗಳೆಡೆಯಲ್ಲಿ !

ಚಿತ್ರ—ಮಾನವರ ದೃಷ್ಟಿಗದು ಅಗೋಚರವೆಂಬುದನು
ಅರಿಯರವರೆಂದು ! ಬಿಡುಗಣ್ಣರೇ ಬಲ್ಲರದು
ಧಾವಿಸುವ ರೀತಿಯನು ಊರ್ಧ್ವಲೋಕ ಪಥದಲಿ
ನಾಬಲ್ಲೆ ನೀಬಲ್ಲೆ ಬಲ್ಲರೇ ಋಷಿಜನರು
ಇತ್ತಬಾ ಸೌಮ್ಯಮುನಿ ! ನೋಡಲ್ಲಿ ಗಗನದಲಿ
ದಿವ್ಯ ಪ್ರಭೆಯೊಂದು ಕೋಟಿ ಸೂರ್ಯ ಕಾಂತಿಯಲಿ
ಸಾಗುತಿದೆ ! ಋಷಿಜನರೆ ! ಕಾಂಬುವುದೆ ನಿಮಗೆಲ್ಲ !

ಸೌಮ್ಯ—ಚರ್ಮ ನೇತ್ರಕಗೋಚರವಾಗಿಹುದಾದೃಶ್ಯಂ
ಕಣ್ಣು ಕೋರೈಸುತಿದೆ ಆ ಬೆಳಕು ದೂರದಲಿ.
ನೀನರುಹು ಆ ರಥದ ಮಾರ್ಗವನು
ನಾನು ತಿಳಿಸುವೆನು ಪಾಂಡುಪುತ್ರರಿಗೆ ವನದಲ್ಲಿ.

ಮುನಿಜನರು—(ತೆರೆಯಲ್ಲಿ)
ತಥಾಸ್ತು ಉಪಕೃತರು ನಿಮಗೆ ನಾವೆಂದೆಂದು

ಚಿತ್ರ—"ಧರೆಯನಾಂತವರಾರು ? ಧರಣಿಯಿರುವುದೇತರ
ಮೇಲೆ ! ದಿಕ್ಪಾಲಕರ ಪುರಂಗಳು ಎಲ್ಲಿಹುವು ?
ಬೊಮ್ಮಾಂಡವೆನಿತಗಲ ಗ್ರಹರಾಶಿ ಧ್ರುವತಾರೆ
ಗಳೆಷ್ಟೆಷ್ಟು ಯೋಜನ ದೂರದಲಿ ನಿಂತಿಹವು"
ಎಂದು ಕೇಳಿದನು ಕೌತುಕದಿಂದ ಅರ್ಜುನನು !

ಸೌಮ್ಯ—ಮಾತಲಿಯ ಪೇಳ್ದ ವಿವರಗಳೇನು ತಿಳಿಸೆನಗೆ
ದೇವಮಾನವ ಸಂಪರ್ಕ ಬೆಳೆದಂತಾಯ್ತು !

ಚಿತ್ರ—ಕೆಳಗಣಂಡ ಕಟಾಹ ತೊಡಗಿಯೆ ಜಲರಾಶಿ
ತುಂಬಿಹುದದರಘಾತ ಇಪ್ಪತ್ತೈದು ಕೋಟಿಯ
ಪವಣ ಪಡೆದಿದೆ ತಿಳಿಯೆ ಇಳೆಯದರ ಮೇಲೊಂದು
ಕೋಟಿಯ ದಳದಲಿಹುದು ಅಲ್ಲಿಂದ ಮೇಲ್ಗಡೆಯ
ಅಳತೆಯದು ಚವ್ವೀಸ ಕೋಟಿಯಹುದು ಅಜಾಂಡ
ಪರ್ಯಂತ ; ಹತ್ತಿರದಲಿದೆ ಅತಳ ಅಲ್ಲಿಂದ
ವಿತಳ ಸುತಳ ತಳಾತಳ ಮಹತಳ ರಸಾತಳ
ಪಾತಾಳ ಎಂದೆಂಬ ಲೋಕಗಳು ಏಳಿಹವು.
ಒಂದೊಂದರಂತರ ಹತ್ತುಹತ್ತುಸಾವಿರ
ಯೋಜನವು. ಅಲ್ಲಿಂದ ಭೂಲೋಕ ಅತ್ತಭುವ
ರ್ಲೋಕಸುವರ್ಲೋಕ ಮಹಾಲೋಕ ಅಲ್ಲಿಂದ
ಜನಲೋಕ ತಪಲೋಕ ಸತ್ಯಲೋಕಗಳಿಹವು.

'ದಾರುಣಿಯನಹಿ ತಾಳ್ದನಾತನನು
'ವೀರಕನುತನುಹೊತ್ತನು ಅನಿತರ ಭಾರವನು
ನಿಜಶಕ್ತಿ ಧರಿಸಿಹಳು ಲೀಲೆಯಲಿ ತೋರಗಿರಿ
ಶ್ರೇಣಿಯನು ಧರಿಸಿರ್ಪ ಧರೆ ನೀರಿನಲಿ ಮುಳುಗ
ದಂದದಲಿ ವಾರಣಂಗಳು ಧರಿಸಿಕೊಂಡಿಹವು
ಎಂಟು ದಿಕ್ಕಿನಲಿ. ಈ'ಧರಣಿ ತಾನೈವತ್ತು
ಕೋಟಿಯಹರಹು ಎಂದನು ಸುರೇಂದ್ರ ಸಾರಥಿಯು.

ಪುಷ್ಪ—ನೋಡಿದೆಯ ! ಧಾವಿಸಿತು ದೇವರಥ ವೇಗದಲಿ
ಗರುಡ ಗಂಧರ್ವ ಯಕ್ಷವಿದ್ಯಾಧರರ ಮೇಣ್
ಕಿಂಪುರುಷ ಕಿನ್ನರರ ಲೋಕಗಳ ಹಾಯ್ದುತ್ತ
ಮುಟ್ಟಹುದು ಸುರಲೋಕದೆಲ್ಲೆಯನು ; ಮೊಳಗುತಿದೆ
ದೇವದುಂದುಭಿ ಸ್ವರ್ಗದಲಿ ಸುರರೆಲ್ಲ ಹೂ
ಮಳೆಯ ಕರೆಯುತಿಹರಲ್ಲಿ ಹರ್ಷೋದ್ಗಾರದಲಿ
ನಾವಿನ್ನು ತೆರಳೋಣ ಮನೋವೇಗದಲೀಗ
ಅನಿಮಿಷೇಂದ್ರನ ದಿವ್ಯಸಭಾಮಂದಿರದೆಡೆಗೆ

ಚಿತ್ರ—ಅಂತಕ್ಕು ತೆರಳೋಣ. ವಂದನೆಯು ಸೌಮ್ಯಮುನಿ !

ಸೌಮ್ಯ—ಶುಭಮಸ್ತು ನಾನಿನ್ನು ಕಾಮ್ಯಕದ ದಾರಿಯಲಿ
ಹೊರಡುವೆನು

ಪುಷ್ಪ— ವಂದಿಸೆನು ಸೌಮ್ಯಮುನಿ ! ಶುಭಮಸ್ತು

(ತೆರೆ ಬೀಳುವುದು) (ನಿಷ್ಕ್ರಮಣ)

## ದೃಶ್ಯ ೩

(ಅಮರಾವತಿಯ ನಂದನವನ)

(ತೆರೆಯ ಮುಂದೆ)

ಚಿತ್ರ—(ಪ್ರವೇಶಿಸಿ)
ಇತ್ತಬಾ, ಪುಷ್ಪರಥ ! ಹನ್ನೆರಡು ತಿಂಗಳಾಯ್ತು
ಈ ಸುಂದರ ನಂದನೋದ್ಯಾನದಲಿ ಸಂಚರಿಸಿ
ತಂಗಾಳಿ ಬೀಸುತಿದೆ ತನಿಗಂಪು ಬೀರುತಿದೆ ;
ಹೂಬಿಟ್ಟು ಬಳುಕುತಿವೆ ಲತೆಗಳಲ್ಲೆಲ್ಲು ನವ
ಕನ್ಯೆಯರು ನಗುವಂತೆ ಕಿಲಕಿಲನೆ ಮೃದುಹಾಸ್ಯ
ವೈಖರಿಯ ಲೀಲೆಯಲಿ ಶೃಂಗಾರ ರಂಗದಲಿ.

ಪುಷ್ಪ—(ಪ್ರವೇಶಿಸುತ್ತ)
ಕೇಳಿದೆಯ ಚಿತ್ರಚೂಡ ! ಹೇಳಿದನು ಚಿತ್ರಸೇನ
ಅರಮನೆಯು ದಾರಿಯಲಿ ಹಿಂದೆ ನಾ ಬಂದಂದು
ದೇವೇಂದ್ರನಿಂದು ರತ್ನಸಭಾಭವನದಲ್ಲಿ
ಸತ್ಕರಿಸಿ ದೇವ ಸನ್ಮಾನಗೈಯುವನಂತೆ
ಪಾರ್ಥಂಗೆ ! ಅದಕೆಂದೆ ಅಷ್ಟದಿಕ್ಪಾಲಕರು
ಬರುತಿಹರು ದೇವೇಂದ್ರ ಸಂದರ್ಶನಾರ್ಥದಲಿ.
ಅಲ್ಲದೆಯೆ ಅಮರಾವತಿಯ ಬೀದಿಬೀದಿಯಲಿ
ಸಂಭ್ರಮದಿ ಓಡಾಡುವರು ದೇವ ಲಲನೆಯರು

ಚಿತ್ರ—ನಿನ್ನ ನುಡಿ ನಿಜವಾಯ್ತು ! ಅರಮನೆಯ.ನಿರೂಪವೆ
ಬಂದಾಯ್ತು ! ನಿನ್ನೆ ರಾತ್ರಿಯಲಿ ಓದಿಲ್ಲವೇ !
(ಅತ್ತ ನೋಡಿ)
ನೋಡಲ್ಲಿ ಪುಷ್ಪರಥ ! ಚಂದ್ರಶಾಲೆಯ ಕಡೆಗೆ
ವರರಂಭೆ ತಿಲೋತ್ತಮೆ ಊರ್ವಶೀ ವರೂಥಿನಿ

ಮಧುರಸ್ವರೆ ಘೃತಾಚಿ ಸುಲೇಖೆ ಸುರಭಿ ಗೌರೀ
ಸುಕೇಶಿ, ಚಿತ್ರರಥಿ ಮೇನಕೆ ಸುಗುಣೆ ಸುಲೋಚನೆ
ಚಾರು ಮುಖಿ ಸುರಸೆ ರಾಗಿಣಿ ಪೂರ್ವ ಚಿತ್ತಿಯರು
ಬೆಡಗು ಬಿನ್ನಾಣ ವೈಯ್ಯಾರದಲಿ ಬರುತಿಹರು
ನಾಟ್ಯಕೇಳಿಯಲಿ ಲೋಕ ಮೆಚ್ಚುವಂದದಿ
ಅರಮನೆಯ ದಾರಿಯಲಿ ಶೃಂಗಾರ ಲೀಲೆಯಲಿ !

ಪುಷ್ಪ—ಆ ಭರತ ಹರಿಶ್ಚಂದ್ರ ನಳಪುರು ಕುತ್ಸನೃಪ
ನಹುಷ ದಿಲೀಪ ದಶರಥ ರಘುಚಕ್ರಾಧೀಶ
ಶಂತನು ಮಹಾಪಾಂಡು ನೃಪರಿಗಿಲ್ಲ ಸುರಸಭೆ
ಯಲಿಂಥ ಸ್ವಾಗತವು ! ಹಿಂದಿಲ್ಲ ಮುಂದಿರದು.
ಸಕಲ ಸೌಭಾಗ್ಯವೇ ಮೈವೆತ್ತು ನಿಂತಂತೆ
ಕಾಣುತಿದೆ ಅರ್ಜುನನ ಸನ್ನಿದಿಯಲಿಂದು ಸುರ
ರಾಜಧಾನಿಯು ನೋಡು ! ಸುರರಿಂಗಾಯ್ತು ಬಿಡು
ಗಣ್ಣರೆಂದೆಂಬ ಅನ್ವರ್ಥನಾಮಂಸದಾ !

ಚಿತ್ರ—ಅಜೇಯನೆನಿಸಿಹನು ಕಲಿಪಾರ್ಥ ಅವನಿಯಲಿ !
ಪಾಶುಪತಮಹಾಸ್ತ್ರವನು ಪಡೆದನು ಧೂರ್ಜಟಿಯ
ಕೃಪೆಯಿಂದ ಅಂಜನಾಸ್ತ್ರವನು ಪಡೆದ ಗಿರಿಜೆಯ
ದಯದಿಂದ ವೈರಿಗಣ ತತ್ತರಿಸುತಿದೆ ಮೂ
ಲೋಕವಲಯದಲಿಂದು ! ಅರ್ಜುನನ ವಿಜಯವೇ
ದಿವಿಜವಿಜಯವೆಂಬಂತಾಗಿಹುದು, ಪುಷ್ಪರಥ !

ಪುಷ್ಪ—ಮಂದೇಹರೆಂದೆಂಬ ರಾಕ್ಷಸರು ಅಲ್ಲದೆಯ
ಕಾಲಕೇಯನಿವಾತ ಕವಚರೂಬಾಧಿಪರು
ಗೀರ್ವಾಣ ಲೋಕವನು. ಇನ್ನುಂಟೆ ದಾನವರ
ದೌರ್ಜನ್ಯ ದಿವಿಜರಿಗೆ ! ಲೋಕಕಂಟಕರೆಲ್ಲ

ನಿಸ್ಸಾರವಾಗುವುದು ಸಟೆಯಲ್ಲ ಶೀಘ್ರದಲಿ
ಪ್ರಳಯರುದ್ರನ ಶಿವ ಪಾಶುಪತಾಸ್ತ್ರ ಶಕ್ತಿಯಲಿ

ಚಿತ್ರ—(ಅತ್ತ ನೋಡಿ)
ದಿವಿಜರಥ ಬರುತಿಹುದು ಚಂದ್ರವೀಧಿಯಲಿತ್ತ
ನಂದನವನದ ಮಾರ್ಗದಲಿ ನಗುವ ಸಂಚಾರ
ಕತದಿಂದ ಅರ್ಜುನನು ಕುಳಿತಿಹನು ರಥದಲ್ಲಿ
ಸುರವೃಂದ ಚಲಿಸುತಿದೆ ಸುರಪತಿಯ ಅರಮನೆಯ
ಒಡ್ಡೋಲಗದತ್ತ ! ತಡವೇಕೆ ? ಪುಷ್ಪರಥ
ಸಾಗೋಣ ಸೂರ್ಯವಿಧೀಯ ಹಿಡಿದು, ಬಳಸಿಲ್ಲ.

ಪುಷ್ಪ—ಅಂತಕ್ಕು ! ನಡೆಮುಂದೆ (ನಿಷ್ಕ್ರಮಣ)
(ತೆರೆ ಏಳುವುದು)

ಮಾತಲಿ—(ಪ್ರವೇಶಿಸಿ)
ಬಾ, ಪಾರ್ಥ ! ಇದುವೆ ಸುರಲೋಕ ನಂದನವನಂ.
ಇಲ್ಲುಂಟು ನಿತ್ಯ ಸೌರಭಯುಕ್ತ ದೇವಶ್ರೀ
ಮಲ್ಲಿಗೆಯು ; ಸುರಲೋಕಸಾಮ್ರಾಜ್ಞಿ
ಶ್ರೀಗೌರಿ ವರಲಕ್ಷ್ಮಿ ಸರಸ್ವತಿಯರಿಗಿಲ್ಲ
ಈ ಭಾಗ್ಯ; ಆದರೂ ಪ್ರತಿ ಮಂಗಳವಾರದಲಿ
ಶುಕ್ರವಾರದಲಿ ಶಚೀದೇವಿಯರು ಕಳಿಸುವರು
ಕೈಲಾಸ ವೈಕುಂಠ ಬ್ರಹ್ಮಲೋಕದಂತಃ
ಪುರಗಳಿಗೆ ತಪ್ಪದೆಯೆ ತ್ರಿಮೂರ್ತಿಸತಿಯರಿಗೆ
ಈ ದಿವಿಜಸೌರಭ ಮಲ್ಲಿಕಾಪುಷ್ಪವಂ

ಅರ್ಜುನ—ಸಾಷ್ಟಾಂಗ ಪ್ರಣಾಮಗಳು ಮಲ್ಲಿಗೆಯ ಬಳ್ಳಿಗೆ !
ಎಂಥ ಸುಕೃತ ಪುನೀತ ಮಲ್ಲಿಕಾಲತೆಯಾಯ್ತು !

ಮಾತಲಿ—ಜಗತ್ಸೃಷ್ಟಿಯಾದಂದು ಈಲತೆ ಅಂಕುರಿಸಿ
ಬೆಳೆಯುತಿದೆ [illegible] ಅಮೃತ[illegible]

ಅರ್ಜುನ—ಅದು ಯಾವ ದಿವ್ಯತರು ? ಎಷ್ಟೊಂದು ರಮ್ಯಕರ
ವಾಗಿಹುದು ; ಶಾಖೋಪಶಾಖೆಗಳ ಬಿತ್ತರಿಸಿ
ಗಂಭೀರಭಾವದಲಿ ನಿಂತಿಹದು ಮಧ್ಯದಲಿ !

ಮಾತಲಿ—ಅದುವೆ ಶ್ರೀಕಲ್ಪವೃಕ್ಷ ! ಸುರಲೋಕದ ಅಕ್ಷಯ
ಭಂಡಾರ ತಾನಾಗಿ ನಿಂತಿಹುದು ತಾರುಣ್ಯ
ರೂಪದಲಿ ಸರ್ವಸೌಭಾಗ್ಯ ಫಲದಾಯಿನಿ !
ದೇವರಾಜನ ಸಕಲ ಭೋಗಭಾಗ್ಯದಾಗರ
ವೆನಿಸಿಹುದು ಈ ಮಹಾ ಮೃತ್ಯುಂಜಯ ವೃಕ್ಷಂ
ಚತುರ್ದಶ ಲೋಕ ಸೃಷ್ಟಿಯಲಿದು ಏಕೈಕ !

ಅರ್ಜುನ—ಭಕ್ತಿಯಿಂಪೊರಮಡುವೆ ದೇವತರು ಮೂಲದಲಿ

ಮಾತಲಿ—ಇತ್ತ ಬಾ ಧನಂಜಯ ! ನೋಡಲ್ಲಿ ಕಾಣುತಿವೆ
ದೇವಚಿಂತಾರತ್ನ ಕೋಟಿಸೂರ್ಯ ಪ್ರಕಾಶ
ವೈಭವದಲ್ಲಿ ! ಇದುವೆ ಸಕಲಾರ್ಥ ಪ್ರದಾಯಕ
ಚಿಂತಾಮಣಿ, ಸುರರಷ್ಟೈಶ್ವರ್ಯ ಸೌಭಾಗ್ಯ
ಸಂಪದದ ಆಗರಂ ಅನೂನಂ ಎಂದೆಂದು !

ಅರ್ಜುನ—ಅಭಿನಂದಿಪೆನು ಮಹಾರತ್ನನಿಧಿ ಭಾಗ್ಯಕ್ಕೆ !

ಮಾತಲಿ—ಇತ್ತಬಾ, ಮಂದಾರತರು ವೃಂದ ಛಾಯೆಯಲಿ
ವಿಶ್ವಕರ್ಮನಿರ್ಮಿತ ಚಂದ್ರೋಪಲ ಮಾರ್ಗದಲಿ
ತನುಜಾತೆ ನಂದಿನಿಯು ಜೊತೆಯಲ್ಲಿ ಚಲಿಸುತಿದೆ
ಕಾಮಧೇನು ಗೀರ್ವಾಣ ಗಂಗಾ ನದಿಯತ್ತ
ಸುರಲೋಕ ಪ್ರಾಣ ಸಂಜೀವಿನಿಯು ಸುರಧೇನು !
ಎಂಬುದನು ನೀಬಲ್ಲೆ ಕಲಿಪಾರ್ಥ ! ಋಷಿವರರು
ಪುಣ್ಯಾತ್ಮರೊಮ್ಮೊಮ್ಮೆ ಕರೆದೊಯ್ಯುವರು ಯಜ್ಞ
ಕಾರ್ಯದಲಿ ಹೋಮದ್ರವ್ಯವನೀವ ಪ್ರೀತಿಯಲಿ !

ದಿಲೀಪನೃಪ ಪಡೆದನು ಹಿಂದೆ ಪುತ್ರಸಂತತಿಯ
ನಂದಿನಿಯ ಸೇವೆಯಲಿ ! ಇಂದ್ರಾಣಿ ಪೂಜಿಸಿಪಳು
ದಿನವು ಸುರಧೇನು ನಂದಿನಿಯರನು ಭಕ್ತಿಯಲಿ

ಅರ್ಜುನ—ಅನಂತಾನಂತ ದೀರ್ಘದಂಡ ಪ್ರಣಾಮಗಳಂ
ಅರ್ಪಿಸುವೆನು ಗೋದೇವಿಯರ ಸನ್ನಿಧಿಯಲ್ಲಿ.

ಮಾತಲಿ—ಇತ್ತಬಾ ಫಲ್ಗುಣಾ ! ಅಲ್ಲಿ ಅಕ್ಷಯವೃಕ್ಷ
ಡೆಡೆಯಲಿ ಬೃಂದಾರಕಗಂಗಾನದಿಯಲ್ಲಿ
ನೀರಾಟವಾಡುತಿದೆ ಐರಾವತ ಆನಂದ
ಭರದಲ್ಲಿ. ಹಿಂದೆ ನಿಮ್ಮಮ್ಮ ಕುಂತೀದೇವಿ
ಗಜಗೌರಿ ಪೂಜೆಯನು ಮಾಡಿದಂದು
ಐರಾವತ ಬಂದಿತ್ತು ಸುರಪನಾಣತಿಯಂತೆ
ನೀನಂದು ನಿರ್ಮಿಸಿದ ಶರಜಾಲ ಸೋಪಾನ
ವಿಳಿದು ಇಂದ್ರ ಪ್ರಸ್ಥನಗರಕ್ಕೆ ಪೂಜೆಗಾಗಿಯೆ
ನೆನಿಪಿಹುದೆ ಫಲ್ಗುಣನೆ !

ಫಲ್ಗುಣ— ಮರೆತಿಲ್ಲ ನೆನಪಿಹುದು

ಮಾತಲಿ—ಅಲ್ಲಿಹುದು ನೋಡು ಸೋಮತೀರ್ಥದ ಬಳಿಯಲ್ಲಿ
ಅಶ್ವಶಾಲೆಯಲಿ ಉಚ್ಚೈಶ್ರವಸ್ಸು ದೇವಾಶ್ವ
ಆ ದಿವ್ಯ ತೇಜಿಯನು ದಿನದಿನವು ದೇವೇಂದ್ರ
ತಪ್ಪದೆಯೆ ಪೂಜಿಪನು ಭಕ್ತಿಯಲಿ ಪ್ರೀತಿಯಲಿ

ಅರ್ಜುನ—ಕಣ್ತುಂಬ ನೋಡುವೆನು ಪಟ್ಟದಶ್ವವನು ಬಾ !

ಮಾತಲಿ—ದೇವದಾನವರಂದು ಸಮುದ್ರಮಥನ ಮಾಡಿದ
ಕಾಲದಲಿ ಜನಿಸಿದುವು ಕಲ್ಪವೃಕ್ಷ ಕಾಮಧೇನು ಸುರಗಜ
ಐರಾವತಂ ಉಚ್ಚೈಶ್ರವಸ್ಸು ಸುಧಾಕರರು
ಲಕ್ಷ್ಮೀ ಕೌಸ್ತುಭರತ್ನ ಚಿಂತಾಮಣಿಯಲ್ಲದೆ
[illegible] ಮತ್ತೆ [illegible]

ಶರಧಿಯಲಿ ; ಶಿವನು ಕುಡಿದು ಹಾಲಾಹಲವನು
ಧರಿಸಿದನು ಚಂದ್ರನನು ಮುಕುಟದಲಿ ವಿಷ್ಣು ತಾ
ಪಡೆದ ಲಕ್ಷ್ಮಿ ಪ್ರಿಯನು ಕೌಸ್ತುಭರತ್ನವನು ಮತ್ತೆ
ಉಳಿದೆಲ್ಲ ವಸ್ತುಗಳು ದೇವೇಂದ್ರನಲ್ಲಿಹುವು
ಆ ಕಥೆಯೆಲ್ಲ ನೀಬಲ್ಲೆಯಲ್ಲವೆ ಪಾರ್ಥ !

ಅರ್ಜುನ—ಬಲ್ಲೆನೆಲ್ಲವನು ಧೌಮ್ಯಮುನಿಯಿಂದ ಅರಣ್ಯ
ವಾಸದಲಿ

ಮಾತಲಿ— ದೇವಸಭೆಗೀಗ ವೇಳೆಯಾಯಿತು
ನಾವಿನ್ನು ತೆರಳೋಣ

ಅರ್ಜುನ— ಅಂತಕ್ಕು ಹೊರಡೋಣ

(ತೆರೆ ಬೀಳುವುದು) (ನಿಷ್ಕ್ರಮಣ)

## ದೃಶ್ಯ ೫

(ಉರ್ವಶಿಯ ಅಂತಃಪುರ. ಸಖಿಯರು ; ವೀಣಾಗಾನ ; ರಾತ್ರಿ ಮೊದಲನೆಯ ಜಾವ ಕಳೆದಿದೆ. ಊರ್ವಶಿಯು ತಾನೆ ಚಿತ್ರಿಸಿದ ಅರ್ಜುನನ ಭಾವಚಿತ್ರವನ್ನು ನೋಡುತ್ತಿರುವಳು.)

(ತೆರೆಯ ಮುಂದೆ)

ಚಂದ್ರಚೂಡ—(ಪ್ರವೇಶಿಸುತ್ತ)
ಅಮರಾವತಿಯಿಂದು ಬಿಡುಗಣ್ಣರ ಬೀಡಾಯ್ತು !
ವಿಕ್ರಮಾರ್ಜುನನ ರೂಪಸೌಂದರ್ಯ ಸೌಭಾಗ್ಯ
ತೇಜೋವಿಲಾಸವಂ ಕಂಡು ದೇವತಿಂತಿಣಿ
ಬೆರಗಾಯಿತ್ತು ! ಅಪ್ಸರೆಯರಾನಂದ ಸರ್ಧಿಸಿತು

(ಹಿಂತಿರುಗಿನೋಡಿ)
ಇಲ್ಲಿಬಾ, ಪುಷ್ಪರಥ ! ಅಂತಃಪುರದಲಿ ತಡ
ವಾಯಿತೇ ದೇವಿಯರಸಾನ್ನಿಧ್ಯ ಭಾಗ್ಯದಲಿ !

ಪುಷ್ಪರಥ—ಸುರಲೋಕ ಲಲನೆಯರು ವೈಮರೆತು ನಿಂತಿಹರು
ರಾಜಬೀದಿಯಲಿ ಕರು ಮಾಡದಲಿ ಹರ್ಮ್ಯಾಗ್ರ
ಭಾಗದಲಿ ಅರ್ಜುನನ ರೂಪರಾಶಿಯ ಕಂಡು
ತಣಿಯಲು ಪರಮಾನಂದೋತ್ಸಾಹ ಭಾವದಲಿ

ಚಿತ್ರಚೂಡ—ದೇವೇಂದ್ರ ತನಯ ಪಾರ್ಥನದೆಷ್ಟು ಸುಕೃತನೊ!
ನೋಡಿದೆಯ ಪುಷ್ಪರಥ ! ನಿನ್ನೆ ಸಂಜೆಯೋಲಗದ
ಗಡಣದಲಿ ಸಕಲದಿಕ್ಪಾಲಕರು ಗಂಧರ್ವ
ಕಿಂಪುರುಷ ವಿಧ್ಯಾಧರಖೇಚರ ಗರುಡರೇ
ಮೊದಲಾದ ಸುರರೆಲ್ಲ ನೆರೆದಿರಲು, ದೇವೇಂದ್ರ
ಸಡಗರದಲೆದ್ದು ದೇವ ಸಿಂಹಾಸನದಿಂದ
ಸಿಂಹಗಾಂಭೀರ್ಯದಲಿ ಸಭಾಭವನದ್ವಾರ
ದತ್ತ ಬಂದು ರಥದಿಂದಿಳಿದ ವಿಕ್ರಮಾರ್ಜುನನಂ
ಪುತ್ರ ಪ್ರೇಮದಿಂಕಂಡು ಆಲಿಂಗಿಸಿದನಲ್ಲಿ
ದೇವಗಣವೆಲ್ಲ ಜಯಘೋಷ ಮಾಡುತಿರೆ ವೀಣಾ
ದೇವದುಂದುಭಿ ಮೊಳಗುತಿರೆ ನಾಕ ತಣಿವಂತೆ !

ಪುಷ್ಪ—ನಾನೆಂದು ಕಾಣೆನಂಥ ಸುರಗಣ ಸಭೆಯನು !
ತನಯನನು ಬಿಗಿದಪ್ಪಿ ಆನಂದಾತಿಶಯದಲಿ
ಕೈವಿಡಿದು ನಡಸುತ್ತ ಪಾರ್ಥನಂ ತನ್ನರ್ಧ
ಸಿಂಹಾಸನದಲಿ ಕುಳ್ಳಿರಿಸಿಕೊಂಡು ಸುರಪತಿ
ಠೀವಿಯಲಿ ಸುರಸಭೆಯ ನೀಕ್ಷಿಸಿದ ತಲೆದೂಗಿ

ಚಿತ್ರಚೂಡ—ದೇವೇಂದ್ರನಿತ್ತನು ನಾನಾ ಬಗೆಯ ದಿವ್ಯಾಸ್ತ್ರ
ಜಾಲವನು ತನಯಂಗೆ ಅಖಿಲ ದಿಕ್ಪಾಲಕರು

ನೀಡಿದರು ದಿವ್ಯ ಮಂತ್ರಾಸ್ತ್ರ ತೂಣೀರ ಸ್ವರ
ರಥಧನು ನಿಧಿ ಭಾಗ್ಯರಾಶಿಯನು ಪಾರ್ಥನಿಗೆ

ಪುಷ್ಪ—ಶತಾಶ್ವಮೇಧ ಯಾಗವನು ಮಾಡಿದ
ರಾಜರಾಜೇಂದ್ರರಿಗಿಂದು ಲಭಿಸಿಲ್ಲ ಇಷ್ಟೊಂದು
ವೈಭವೋಪೇತ ಸನ್ಮಾನ ವೀಕಲ್ಪದಲಿ
ಅರ್ಜುನಂಗೆಣೆಯುಂಟೆ ಭಾವಿಸಲು ಧರೆಯಲ್ಲಿ

ಚಿತ್ರ—ದೇವಗಣಿಕೆಯರೆಲ್ಲ ಸುರನಾಟ್ಯ ಭಂಗಿಯಲಿ
ಹಾವಭಾವ ವಿಲಾಸದಲಿ ಒನಪು ಒಯ್ಯಾರ
ಗಳಲಿ ಸಂಮೋಹನಾಸ್ತ್ರವನು ಬೀರುತಿರ್ದರು
ಶೃಂಗಾರ ಲೀಲಾನುಭಾವರಸದೃಷ್ಟಿಯಲಿ
ದೇವೇಂದ್ರ ಮೆಚ್ಚುತ್ತ ಮೆಚ್ಚುತ್ತ ಒಮ್ಮೊಮ್ಮೆ
ನೋಡುತ್ತಿದ್ದನು ಧನಂಜಯನ ಮುಖಭಾವವನು
ಮತ್ತೊಮ್ಮೆ ಕಾಣುತಿದ್ದನು ನಾಟ್ಯಭಂಗಿಯನು

ಪುಷ್ಪ—ಭುವನ ಮೋಹಿನಿ ತರುಣಿ ಊರ್ವಶಿಯ ನಾಟ್ಯವನು
ತದೇಕಚಿತ್ತದಲಿ ರೆಪ್ಪೆ ಮಿಟುಕಿಸದಂತೆ
ನೋಡುತ್ತ ಕಾಂತೇಯ ಅನಿಮಿಷನೆನಿಸಿರ್ದನು
ಸಂಪೂರ್ಣ ಸರ್ವಾಂಗ ಸುಂದರಿಯು ಅಪ್ಸರೋ
ತ್ತಮೆಯಿಂದು ದಿವ್ಯನಾಟ್ಯಯೋಗಿನಿಯೆಂಬಂತೆ
ಚಿತ್ತದಲಿ ಅರ್ಜುನನ ಮೂರ್ತಿಯನು ನೆಲೆಗೊಳಿಸಿ
ಮದನಕದನಕುತೂಹಲಭಾವದಲಿ ತಾ ರತಿ
ಭಿಕ್ಷೆಯನು ಬೇಡುವಂದದಲಿ ಕಾಲ್ಗೆಜ್ಜೆ ಘಲ್
ಘಲಕೆನಲು ಶೃಂಗಾರ ಚೇಷ್ಟೆಯಲಿ ಆಡಿದಳು
ಶ್ರುತಿತಾಳ ಮೃದಂಗ ಸುನಾದಲಿ ಸಭೆಯಲ್ಲಿ
ಅರ್ಜುನೋರ್ವಶೀ ಸಾಮರಸ್ಯಾನುಭವದಲಿ

ಚಿತ್ರ—'ಅಸಮಶರಸಮರಸಮಯ'ದಲಿ ಸೋತವಳಂತೆ
ಬಳಲಿದಳು ನವಕೋಮಲಾಂಗಿ ಊರ್ವಶಿಯಂದು !
ತದ್ಭಾವವನು ತಿಳಿದ ದೇವೇಂದ್ರ ಕಣ್ಸನ್ನೆ
ಯಿಂದಲಿ ತೆರೆಯ ನೆಳಸಿದನು ಸಭೆಯಾಭಾಸ
ವಾಗದಂತೆಯೆ ಕ್ಷಣಮಾತ್ರದಲಿ ನೋಡಿದೆಯ !

ಪುಷ್ಪ—ನೋಡಿದೆನು ರಸಭಂಗ ವಿನಿತಿಲ್ಲ ಚಿತ್ರ ಚೂಡ
ಸಭೆಯಲ್ಲಿ ; ನಾನೆಂದು ಕಂಡಿಲ್ಲ ಊರ್ವಶಿಯ
ಸಮರೂಪೆ ತರುಣಿಯನು ಈರೇಳು ಲೋಕದಲಿ
ಬ್ರಹ್ಮಸೃಷ್ಟಿಯಲಿ ವರ್ಣಿಸಲು ಕವಿಯಲ್ಲ ನಾನು !
ಊರ್ವಶಿಗೆ ಸಮರೂಪೆ ಊರ್ವಶಿಯೆ! ಸೃಷ್ಟಿಯಲಿ.

ಚಿತ್ರ—ಸರ್ವೋಚಿತಂ ! ನಿನ್ನ ಸುರಕವಿಹೃದಯವಾಣಿ !
ದೇವೇಂದ್ರಗ್ರಹಿಸಿದನು ಊರ್ವಶಿಯ ಭಾವವನು
ಶಚಿದೇವಿಗರಿವಾಯ್ತು ನಿಮಿಷದಲಿ ನಡೆದಳು
ತೆರೆಯ ಮರೆಯಲ್ಲಿ ಸ್ವೈಮರೆತು ಸಖಿಯ ತೊಡೆಯಲಿ
ಮಲಗಿದ್ದ ಊರ್ವಶಿಯ ಬಳಿಗಾಗ ಕಾತುರದಿ

ಪುಷ್ಪ—ಶೈತ್ಯೋಪಚಾರವೆಸಗಿದರು ಊರ್ವಶಿಗಲ್ಲಿ ಸಖಿಯರು
ಅರಮನೆಯ ಅಂತಃಪುರದ ಹಂಸತೂಲಿಕಾ
ತಲ್ಪದಲಿ ಇರುಳೆಲ್ಲ ಪರಿಪರಿಯ ರೀತಿಯಲಿ

ಚಿತ್ರ—ಇಂದ್ರನಾಣತಿಯಂತೆ ಫಲ್ಗುಣನು ಊರ್ವಶಿಯ
ಅತಿಥಿಯಾಗಿರಲು ಬರುವನಿಂದು ಸಂಭ್ರಮದಲ್ಲಿ !

ಪುಷ್ಪ—ನಾವಿನ್ನು ತೆರಳೋಣ ಊರ್ವಶಿಯ ಗೃಹದತ್ತ
ದೇವೇಂದ್ರನನುಮತಿಯಯಲಿ ಬಯಸೋಣ
ಸುಸ್ವಾಗತವನಲ್ಲಿ ಊರ್ವಶಿಯ ಜೊತೆಯಲ್ಲಿ

(ತೆರೆ ಏಳುವುದು) (ಊರ್ವಶಿಯ ಅಂತಃಪುರ)

(ತೆರೆಯಲ್ಲಿ)

(ವಂದಿಮಾಗಧರು)

ಇಬ್ಬರು ಜೊತೆಯಲ್ಲಿ—ಅಮರೇಂದ್ರ ಹೃದಯಾಂಬರ ವಿಮಲಸಂಜ್ಯೋತಿ
ಪರಾಕು ! ಬಹುಪರಾಕು !!

ಮತ್ತಿಬ್ಬರು— ಶತಮನ್ಯುಸಂಜಾತ
ತ್ರಿದಶಾಲಯ ಸಂಪೂಜ್ಯ ವಿಕ್ರಮಾರ್ಜುನದೇವ
ಪರಾಕು ! ಬಹುಪರಾಕು !

ಇಬ್ಬರು— ದಿವಿಜಶತ್ರು ಮತ್ತೇಭ
ಕುಲ ವೀರಕಂಠೀರವ ಪಾಂಡು ತನಯ ಪಾಶು
ಪತಾಸ್ತ್ರ ವಿಭೂಷಣಂ ಪಾರ್ಥಶುಭಪ್ರತಾಪಂ
ಪರಾಕು ! ಬಹುಪರಾಕು !

ಅರ್ಜುನ—(ಪ್ರವೇಶಿಸಿ, ಶೃಂಗಾರ ಭವನವನ್ನು ನೋಡುತ್ತಿರುವನು)

ಕಲ್ಪಲತೆ—(ಸಖಿ ಎದುರುಗಡೆಯಿಂದ ಬರುವಳು)
ದಿವಿಜೇಂದ್ರ ಸಂಪ್ರೀತ ಧನಂಜಯ ಶುಭಾಂಗ !
ಸುಸ್ವಾಗತಂ ದೇವಿ ಊರ್ವಶಿಯ ಹರ್ಮ್ಯದಲಿ !

(ಸಖಿಯರು ದಿವ್ಯಾರುತಿಯನ್ನು ಬೆಳಗುವರು)

ಕಲ್ಪಲತೆ—ಮದನಮೋಹನಚಂದ್ರ ಸಕಲಗುಣ ಮಣಿಸಾಂದ್ರ !
ಶತ್ರುವಂಶ ಸಂಹಾರ ಮಹೋಗ್ರನೆ ! ಭೈರವನೆ !
ಪರಮಧೀರೋದಾತ್ತ ಜಯಮಕ್ಕೆ ಶುಭಮಕ್ಕೆ
ವಿಜಯಿಸೌವೀರಾಧಿವೀರೇಂದ್ರ ಕೌಂತೇಯ !

ಊರ್ವಶಿ—(ಪ್ರವೇಶಿಸಿ, ಅರ್ಜುನನಿಗೆ ಹಸ್ತಲಾಘವವಿತ್ತು)
ಸುರೇಂದ್ರ ಸಂಪ್ರೀತ ಪಾರ್ಥಂಗೆ ಜಯಮಕ್ಕೆ !
ಈ ಊರ್ವಶಿಯ ಭವನದಲಿ ಸ್ವಾಗತವು ನಿನಗೆ !

(ಅರ್ಜುನನನ್ನು ದಿವ್ಯಾಸನದಲ್ಲಿ ಕುಳ್ಳಿರಿಸುವನು, ಸಖಿಯರೆಲ್ಲ ತೆರಳುವರು)

**ಊರ್ವಶಿ**—ಇಂದು ಸಾರ್ಥಕವಾಯ್ತೆನ್ನ ಸುರಜನ್ಮ ನಿನ್ನಾ
ಗಮನದಿಂದ ಕಲಿಪಾರ್ಥ. ಕೇಳಾ, ಮರ್ತ್ಯಲೋಕ
ವೀರ ಸೌಂದರ್ಯ ಚಂದ್ರನೀನೆಂದು ಕಂಡೆನು
ನಿನ್ನೆ ಸುರಸಭೆಯೋಲಗದಲಿ ದೇವಗಣದಲ್ಲಿ
ಬಯಸಿದೆನು ನಿನ್ನ ನಾ ಪ್ರದ್ಯುಮ್ನ ಕೇಳಿಯಲಿ
ಮನಸೋತು ಸೋತಾಯ್ತು ಗೀರ್ವಾಣ ಸಾಕ್ಷಿಯಲಿ
ಎನ್ನಭಿಮತವ ನರಿತು ಕಳಿಸಿಹನು ದೇವೇಂದ್ರ
ಕಾಮಭಿಕ್ಷೆಯ ಬೇಡುವೆನು ಪಾರ್ಥ ! ಸೆರಗೊಡ್ಡಿ
ತೋರಿಂದು ನಿನ್ನ ಶೌರ್ಯೌದಾರ್ಯ ಸಂಪೂರ್ಣ
ಬಾಹುಬಲ ನಿಜಕ್ಷಾತ್ರ ತೇಜಶ್ಶಕ್ತಿಯನು
ಆ ನಿಷ್ಕರುಣಿ ಮಾರ ಸಂಹಾರ ಸಮರದಲಿ (ಹತ್ತಿರ ಬರುವಳು)

**ಅರ್ಜುನ**—ಏನನಾಡಿದೆ ನೀನು ಸುರತಳೋದರಿ ಸಾಕು ;
ಮಾನವರು ನಾವು ಸುರವಾರನಾರಿಯರು ನೀ
ವೆಂಬುದನು ಮರೆಯದಿರು ನರಧರ್ಮ ಬೇರೆ ಸುರ
ಧರ್ಮವೇ ಬೇರೆಯೆನೆ ನೀನೆತ್ತ ನಾನೆತ್ತ ?
ಅಧರ್ಮ ಕಲಿಸುವುದು ತರವಲ್ಲಮಾನಿನೀಮಣಿ !
ಸುರಪನಾಣತಿಯಂತೆ ಬಂದಿರುವ ಅತಿಥಿಯನು
ಗೃಹಧರ್ಮದಲಿ ಸತ್ಕರಿಸಲೊಲ್ಲದೆಯೆ ನೀನು
ಧರ್ಮಹಾನಿಯಗೈಯ್ಯೆ ಬಯಸುವರೆ ನಿಮಿಷದಲಿ

**ಊರ್ವಶೀ**—ರತಿ ಕೇಳಿಯಲಿ ಸತಿಯ ತಣಿಸಲರಿಯದ ಧರ್ಮ
ವೆನಿತಿದ್ದರೇನು ? ಈ ಸಂನ್ಯಾಸಿ ಧರ್ಮೋಪ
ದೇಶವೇಕೆ ಶೃಂಗಾರ ಲೀಲಾರಂಗದಲಿ
ಖಾಂಡವವನದಹನದಲಿ ಅಂದು ನೀಮೆರೆದ
ಶೌರ್ಯವೇನಾಯ್ತು ? ಅಗ್ನಿದೇವನ ಭಿಕ್ಷೆಯನು
ಸಲಿಸಲಿಲ್ಲವೆ ? ಮಾನವನು ನೀನಲ್ಲದೇವ

ಮಾನವನು ನೀನೆಂಬುದನು ಮರೆಯದಿರು ಪಾರ್ಥ !
ವಿರಹಾಗ್ನಿದೇವ ಭಿಕ್ಷೆಯನು ನೀಡಲಾರೆಯ !

**ಅರ್ಜುನ**—ಲೋಕೋಪಕಾರ ದೃಷ್ಟಿಯಲಿ ಅಗ್ನಿದೇವನ
ಭಿಕ್ಷೆಯನು ಸಲಿಸಿದೆನು ಗಾಂಡೀವಿಯೆನಿಸಿದೆನು !
ನಿಸ್ವಾರ್ಥಿ ಅಗ್ನಿದೇವನ ಭಿಕ್ಷೆಗೆಣೆಯುಂಟೆ !
ನಿನ್ನ ಯಾಚನೆಯಲಿ ಸ್ವಾರ್ಥವೇ ತುಂಬಿಹುದು
ಎನ್ನ ಶೌರ್ಯೌದಾರ್ಯ ಬಾಹುಬಲ ಪರಾಕ್ರಮ
ಗಳೆಲ್ಲ ರಣರಂಗದಲಿ ಶತ್ರುಮರ್ದನದಲ್ಲಿ
ಮೆರೆವುವಲ್ಲದೆ ಕಾಮಿನಿಯ ಅಂಗ ಸಂಗದಲಿ
ಮೆರೆವುದುಂಟೆ ? ಪಾಶುಪತಾಸ್ತ್ರ ತೂಣೀರ
ನಡುಗುತಿಹೆ ಅಧರ್ಮ ವ್ಯಾಮೋಹದೂಷಿತಳು
ನೀನೆಂದು. ದೇವೇಂದ್ರ ಸಹವಾಸ ನಿನಗಿರಲು
"ನೀವೆನ್ನ ಮಾತೃಶ್ರೀ ಊರ್ವಶೀ ದೇವಿಯರು"
ಪಾಂಡವರು ಸತ್ಯಸಂಧರಲ್ಲದೇ ಎಂದೆಂದು
ಧರ್ಮಚ್ಯುತರಲ್ಲ ; ಭಾವಿಸರು ಮನದಲಿ ಪಾಪ
ಸಂಘಟನಕಾರ್ಯವನು ಬ್ರಹ್ಮಪದವಿಯಿತ್ತರು
ಉಗ್ರೋಗ್ರ ತಪದಿಂದಲಾರ್ಜಿಸಿದ ಶಕ್ತಿಯನು
ಶಿವ ಪಾಶುಪತಾಸ್ತ್ರ ಪ್ರಯೋಗದಲಿ ವ್ಯಯಿ
ಸುವೆನಲ್ಲದೆ ಮೆಚ್ಚೆನು ಅಧರ್ಮಾಚರಣೆಯನು

**ಊರ್ವಶೀ**—(ಸಿಟ್ಟಿನಿಂದ)
ಅಹುದಹುದು ಶ್ರೌತಪಥದಲಿ ಬಲ್ಲಿದರು ನೀವು
ಮೂಲೋಕ ಬಲ್ಲುದು ನಿಮ್ಮ ಧರ್ಮಾಧರ್ಮ
ಬುದ್ಧಿಯನು ಮಹಿಳೆಯೊಬ್ಬಳೊಳೈವರೊಡಗೂಡಿ
ಇರುವವರು ನೀವಲ್ಲವೆ ಧರ್ಮಾತ್ಮ ಸೋದರರು !

**ಅರ್ಜುನ**—ಮಾತೃಭಕ್ತರು ನಾವು ತಾಯನೇಮದಲಂದು
ದ್ರೌಪದಿಯಕೊಟೆ ಸ್ವಯಂವರಗೊಳ್ಳುತ್ತ ತಪ್ಪೇನು

ಜನನಿಯ ನುಡಿ ಅಲಂಕ್ಷ್ಯವೆಂಬುದಂ ಸಾರುತಿದೆ
ವೇದಗಣ ಲೋಕದಲಿ ವೇದಬಾಹಿರನಲ್ಲ
ಪಾಂಡು ತನಯರು ಕನಸು ಮನಸಿನಲಿ ಎಲ್ಲಿರಲಿ

ಊರ್ವಶೀ—ಅಕ್ಕಕ್ಕ; ತಾಯ ಮಾತಿನಲಿ ಐವರಿಗೊಬ್ಬ
ಸತಿಯೆಂಬ ನೇಮವನು ಒಪ್ಪಿದಿರಿ. ನಿಮ್ಮಯ್ಯ
ಸುರಪತಿಯ ವಚನವನು ಮಾರಲುಂಟೇ ಪಾರ್ಥ !

ಅರ್ಜುನ—ಜನಕ ದೇವೇಂದ್ರ ನಾಣತಿಯನಾಂತು ಜನನಿಯ
ಗೃಹಕ್ಕೈದಿದರೆ ನಾನು ಮಗನೆಂಬ ಭಾವವನು
ಬಿಟ್ಟು ದುರ್ಮೋಹದಲಿ ಬಯಸುವರೆ ಸಂಗವನು
ನೀವೆನ್ನ ಹಡೆದ ಜನನಿ ಸಮಾನರೆಂಬುದನು
ಮರೆಯಲಾರೆನು, ತಾಯಿ ಮನ್ನಿಸೌ ಕಂದನನು.

ಊರ್ವಶೀ—ಪಂಡಿತರು ಕಿವಿಗೊಟ್ಟು ಕೇಳ್ವಂತೆ ತಲೆದೂಗಿ
ಮಂಡಿತೋಕ್ತಿಯೊಳೊಲ್ದು ಕಾವ್ಯವನು ಹೇಳುತಿರೆ
ಪಾಷಂಡನರಿಯುವನೆ ಜಾಣನರಿವಂತೆ ಆ
ರಸೋಕ್ತಿಯನು ! ಪುಂಡರೀಕಾಕ್ಷಿಯರ ಸುರತ
ಸೌಭಾಗ್ಯವನು ಷಂಡನರಿವನೆ ಲೋಕದಲಿ
ಸುರತಕೋವಿದನು ತಿಳಿಯುವಂತೆಲೆ ನರಾಧಮನು !
ಸುಮನೋನುರಾಗದಲಿ ಒಲಿದ ಹೆಣ್ಣನು ನೂಂಕಿ
ಧಿಃಕರಿಸಿದೆಯದರಿಂದ ಭಾರತ ಭೂಮಿಯಲಿ
ಒಂದು ವರ್ಷ ಪರ್ಯಂತ ನಪುಂಸಕ ರೂಪದಲಿ
ಬಾಳುತಿರು ತಪ್ಪದೀ ಸತಿಶಾಪವೆಂದೆಂದು
ಅಚ್ಯುತನ ಮರೆಹೊಕ್ಕರೆಯು ಮೃಡನ ಬೇಡಿದರು
ನಿಮ್ಮಯ್ಯ ಸುರಪತಿಗೆ ಅರುಹಿದರು ಪರಿಹರಿಸ
ಲಾರರೆಂಬುದನು ಮರೆಯದಿರು ನಡೆ ನಿಲ್ಲದಿರು

ಅರ್ಜುನ—(ಬೆರಗಾಗಿ)
(ಸ್ವಗತ)

ತಪನಾಚರಿಸಿದೊಡೆ ವರಪಾಶುಪತಾಸ್ತ್ರ
ವೆನಗಾಯ್ತು ಧರ್ಮವೇ ತಪವೆಂದರಿದು ನಡೆಯೆ
ಷಂಡತನ ಎನಗಾಯ್ತು ಧರ್ಮದಲಿ ಭೇದವೇ
ನಿಲ್ಲವೆಂದರೂ ಫಲವೆರಡೂ ತೆರವೇಕಾಯ್ತು !
ಕರ್ಮವನು ಮೀರಲಳವಲ್ಲ ವಿಧಿನಿಯಮವಿದು
ಶಿವ ಪಾಶುಪತಾಸ್ತ್ರವೆನಗಾಯ್ತು ಕೌರವರ
ರಕ್ತದಲಿ ಓಕಳಿಯ ನಾಡಿಸುತ ದ್ರೌಪದಿಯ
ಮುಡಿಯ ಕಟ್ಟಿಸುವೆನು ಎಂಬ ಕೆಚ್ಚೆನಗಿತ್ತು
ಹುಸಿಯಲ್ಲ ! ತಪಃಫಲ ಸಿದ್ಧಿಸಿತು ಎಂದೆನ್ನ
ಸೋದರರು ಹರ್ಷದಲಿ ಮೈಯುಬ್ಬಿ ನಿಲ್ಲುವರು
ಆದರೇಂ ! ಊರ್ವಶಿಯ ಶಾಪವನು ದ್ರೌಪದಿಗೆ
ನಾನೆಂತು ಉಸುರುವೆನು ! ಪಾಂಚಾಲೆಗಿದೊಸಗೆಯೆ !
ಇರಲಿರಲಿ ವೃಥಾ ಎನಗೆ ಮನೋ ವ್ಯಥೆಯೇಕೆ !
ಇದರಿಂದ ಎನಗೆ ಉಪಕಾರವೇ ಉಂಟುಂಟು.
ಹನ್ನೆರಡು ವರ್ಷ ವನವಾಸ ಮುಗಿದ ನಂತರ
ಅಜ್ಞಾತವಾಸದಲಿ ಶಿಖಂಡಿ ತನವೆನ್ನಲಿ
ಸಮನಿಸಲಿ ಉಪಕಾರವಾಯ್ತೆನಗೆ ಬಾಳಿನಲಿ
(ಪ್ರಕಾಶ) ದೇವಿಯರೆ, ಅನಂತ ಪ್ರಣಾಮಗಳು ಶುಭಪ್ರದಂ

(ವ್ಯಾಕುಲಚಿತ್ತನಾಗಿ ಅಂತಃಪುರದಿಂದ ತೆರಳುವನು)

(ತೆರೆ ಬೀಳುವುದು)

## ದೃಶ್ಯ ೯

(ಕಾಲಕೇಯರ ರಾಜಧಾನಿ ಹಿರಣ್ಯನಗರಿ. ನಿವಾತಕವಚರ ಒಡ್ಡೋಲಗ. ನಾರದನ ಪ್ರವೇಶ)

(ತೆರೆಯ ಮುಂದೆ)

ಚಿತ್ರ—(ಪ್ರವೇಶಿಸಿ)

(ಸ್ವಗತ)

ವೈರಿ ಚಕ್ರವಿದಾರ ವಿಕ್ರಮಾರ್ಜುನಗೆಣೆಯಿಲ್ಲ
ಬಿಡುಗಣ್ಣರೊಡೆಯ ದೇವೇಂದ್ರ ನರಮನೆಯಲ್ಲಿ
ಸುಖಸಂಕಥಾವಿನೋದದಲಿ ತನ್ನೆಲ್ಲ ಭೂ
ಲೋಕವ್ಯವಹಾರವನು ಮರೆತಂತೆಯೇನಿಲ್ಲ
ಸೋದರರ ಚಿಂತೆಯಲಿ ದ್ರೌಪದಿಯ ನೆನಪಿಲಿ
ಹಗಲಿರುಳು ಪರಿತಪಿಸುವನೆಂದೇ ಕಂಚುಕಿಯು
ಅರುಹಿದನು ದೇವೇಂದ್ರ ಶಚೀದೇವಿಯರಲ್ಲಿ
ವರ್ಷ ನಾಲ್ಕು ಕಳೆದಾಯ್ತು ಅಮರಾವತಿಯಲ್ಲಿ
ಊರ್ವಶಿಯ ಶಾಪದಲಿ ಕಡುನೊಂದ ಪಾರ್ಥನನು
ಸಂತೈಸಿ ಅವನಿಲ್ಲಿ ಭರತನಾಟ್ಯಾಭಿನಯ
ಪ್ರಯೋಗದಲಿ ಪರಿಣತನೆನಿಸುವಂತೆ ಸುರಪತಿ
ಸಂಯೋಜಿಸಿದನು ದೇವನಾಟ್ಯಾಚಾರ್ಯರಲಿ

ಪುಷ್ಪ—(ಪ್ರವೇಶಿಸಿ)

ಶುಭೋದಯವಕ್ಕೆ ಚಿತ್ರಚೂಡ !

ಚಿತ್ರ— ಬಾ ಪುಷ್ಪರಥ

(ಆಲಿಸಿ) ಏನೀಗ ರಣಭೇರಿ ಮೊಳಗುತಿದೆ ಸುರಸೇನಾ
ಶಿಬಿರದಲಿ, ಯಾವರಾಕ್ಷಸರಾಜ ದಂಡೆತ್ತಿ
ಬರುವನೊ ಅಮರಾವತಿಯ ಮೇಲೆ ! ಬಂತೇನೊ
ವಿಪತ್ತು ದಿವಿಜಗಣಕೆ ಗತಿಯೇನು ? ಪುಷ್ಪರಥ !

ಪುಷ್ಪ—(ನಸುನಕ್ಕು)
ದಿವಿಜರಿಗೆ ಭಯವೇನು ಅರ್ಜುನನು ಇರುವಲ್ಲಿ
ನಿವಾತಕವಚರು ಕಾಲಕೇಯರು ಸುರಲೋಕ
ವಿದ್ವೇಷಿಗಳೆಂಬುದನರಿಯೆಯಾ ಚಿತ್ರಚೂಡ !
ಆ ರಕ್ಕಸರು ದುರ್ಮದರು ಸೊಕ್ಕಿ ಮೇರುಗಿರಿ
ಯನು ಮುತ್ತಿಯಕ್ಷ ಕಿನ್ನರ ಖೇಚರರನೆಲ್ಲ
ಸದೆಬಡಿದು ನಿರ್ನಿಮಿತ್ತದಲಿ ಸುರನಾರಿಯರ
ಸೆರೆಹಿಡಿದು ಬಾಧಿಪರು ಮನಬಂದ ರೀತಿಯಲಿ
ಅಂಜದೆಯೆ ಬ್ರಹ್ಮವರಬಲದಿಂದ ಎಂದೆಂದು
ಅಡಗುವರು ಹಗಲಲ್ಲಿ ಸಪ್ತಸಾಗರಗಳಲಿ

ಚಿತ್ರ—ಇಂದೇನು ಬಂತು ದೇವಲೋಕದ ವೈಭವಕೆ ?

ಪುಷ್ಪ—ಕಳೆದ ಹುಣ್ಣಿಮೆಯ ದಿನ ಗೀರ್ವಾಣ ನಾರಿಯರು
ದೇವಗಂಗಾ ನದಿಯಲ್ಲಿ ಮಿಂದು ಜಲ್ಲಾಟ
ವಾಡುತಿರೆ ನಿವಾತ ಕವಚರು ಹೋಚುಹಾಕುತ
ಮೇಲೆರಗಿದರು ಆರ್ಭಟದಲಿ ಬರಸಿಡಿಲೆರಗಿ
ದಂತೆ ! ಹೆಣ್ಣು ಜಿಂಕೆಯ ಹಿಂಡಿನತ್ತ ಹಸಿದ ಹುಲಿ
ನುಗ್ಗಿದಂತೆ ! ಹೆದರಿದರು ಬೆದರಿದರು ಕೋಮಲೆ
ಯರೆಲ್ಲ ಭಯದಿಂದ ನಡುಗಿದರು ದೆಸೆಗೆಟ್ಟು
ಚೀರಿದರು ಬಿದ್ದೋಡಿದರು ಸೋತು ಬಳಲಿದರು

ಚಿತ್ರ—ಏನು ಗತಿಯಾಯ್ತು ಮುಂದೆ ! ಆಧೂರ್ತರನೆಲ್ಲ
ರಣರಂಗದಲಿ ಕಾದಿ ಸದೆಬಡಿದು ನಿರ್ನಾಮ
ಗೈದಲ್ಲದೆ ಸುಖಶಾಂತಿಗೆಡೆಯುಂಟೆ ನಮ್ಮಲಿ

ಪುಷ್ಪ—ಮೆಚ್ಚಿದೆನು ನಿನ್ನಂತರಂಗವನು ಚಿತ್ರಚೂಡ !
ಅಷ್ಟರಲಿ ದೂರದಲಿ ವನವಿಹಾರದಲಿದ್ದ
ಅರ್ಜುನನು ಪ್ರತಿಹರಿಸಿದನು ರಾಕ್ಷಸರ ಬಾಧೆಯನು

ನಿಂತಲ್ಲಿ ಗಾಂಡೀವದಲಿ ಹೂಡಿ ಶರಗಳನು
ರಕ್ಕಸರ ಮೇಲೆ ಸುರಿಸಿದನು ಶರವೃಷ್ಟಿಯನು
ದೈತ್ಯಗಣ ಓಡಿತ್ತು ದೆಸೆದೆಸೆಗೆ ಬೊಬ್ಬಿಡುತ
ನಿಲ್ಲದೆಯೆ ನಾರಿಯರ ಮಾನರಕ್ಷಣೆಯಾಯ್ತು
ಅರ್ಜುನನ ದಿವ್ಯಾಸ್ತ್ರ ಬಲದಿಂದ ಕೇಳಿದೆಯ

ಚಿತ್ರ—ಇಂದೇಕೆ ರಣಭೇರಿನಾದ ಸುರ ಶಿಬಿರದಲಿ
ಮತ್ತೇನು, ರಾಕ್ಷಸರ ಯುದ್ಧ ಕೈಗಟ್ಟಿತೇ

ಪುಷ್ಪ—ಆಚಾರ್ಯ ಬೃಹಸ್ಪತಿಯ ಸಲಹೆಯಲಿ ಸುರೇಂದ್ರ
ಮಾಡಿದನು ಯುದ್ಧ ಘೋಷಣೆಯನು ರಾಕ್ಷಸರ
ರಾಜಧಾನಿ ಹಿರಣ್ಯ ನಗರಿಯನು ಸುಟ್ಟುರುಹಿ
ದಾನವರ ಹುಟ್ಟಡ ಗಿಸುವೆನೆಂಬ ಸಂಕಲ್ಪ
ದಲಿ ಕಟ್ಟಿದನು ಪಾರ್ಥನಿಗೆ ದಿವಿಜಸೇನಾಧಿ
ಪತಿಯ ಪಟ್ಟವನಿಂದು ದಿಗ್ವಿಜಯಕಾಂಕ್ಷೆಯಲಿ

ಚಿತ್ರ—ಸಂಕಲ್ಪ ಸಿದ್ಧಿಸಲಿ

ಪುಷ್ಪ— ಪಾಶುಪತಶರದಿಂದ
ದೈತ್ಯವಂಶವನೆಲ್ಲ ಸವರುವನು ಅರ್ಜುನನು
ಯುದ್ಧದಲಿ ತಪಃಫಲ ಸಿದ್ಧಿಪುದು ಸಟೆಯಲ್ಲ

ಚಿತ್ರ—ಯುದ್ಧಮುಖದಲಿ ನಾವು ಸೇರೋಣ, ಪುಷ್ಪರಥ !

ಪುಷ್ಪ—ಖೇಚರರ ಚೂಳಿಯಲಿ ನಾನಿರುವೆ ನೇತಾರ !

(ತೆರೆ ಏಳುವುದು) (ನಿಷ್ಕ್ರಮಣ)

(ನಿವಾತಕವಚರ ಆಸ್ಥಾನ; ಶುಕ್ರಾಚಾರ್ಯರು, ಮಂತ್ರಿ, ಸೇನಾಪತಿಗಳು ಇರುವರು)

ವಂದಿಮಾಗಧರು—(ತೆರೆಯಲ್ಲಿ)

ಗೀರ್ವಾಣ ಶತ್ರುಗಜ ವ್ಯೂಹಕಾಲಾಗ್ನಿ ರುದ್ರ
ಕಂಠೀರವಾ ! ಸಮಸ್ತ ರಾಕ್ಷಸಕೋಟಿಗಣ
ಸಾರ್ವಭೌಮಾ ! ದೇವಬಲಾರಣ್ಯ ಮೂಲೋ
ತ್ಪಾಟನ ಪ್ರಚಂಡದಾವಾಗ್ನಿ ಭೀಷಣ ರೂಪ
ನಿವಾತ ಕವಚ ರಾಕ್ಷಸೇಂದ್ರ ವಿಜಯಧ್ವಜಾ !
ಪರಾಕು ! ಬಹುಪರಾಕು !!

(ರಾಕ್ಷಸೇಂದ್ರ ಗಂಭೀರ ಗಮನದಿಂದ ಪ್ರವೇಶಿಸುವನು)
(ಪುನಃ ತೆರೆಯಲ್ಲಿ)

ದಾನವ ಕುಲಾಭ್ಯುದಯ ಮಾರ್ತಾಂಡ ಮಂಡಲನೆ
ಜಯಮಕ್ಕು ! ಸುರಲೋಕ ಪ್ರತ್ಯಕ್ಷ ಭಯಂಕರ
ಮಹಾಂತಕಾ ! ಜಯ ಪರಾಕು ಬಹು ಪರಾಕು

(ಮಂತ್ರಿ ದೇವಾಂತಕ ಇದಿರ್ಗೊಂಡು ಸಿಂಹಾಸನದತ್ತ ನಡಸಿಕೊಂಡು ಹೋಗುವನು)

ರಾಕ್ಷಸೇಂದ್ರ—(ಸಿಂಹಾಸನದಲ್ಲಿ ಕುಳಿತು)

ಮಂತ್ರೀಶ ದೇವಾಂತಕಾ ! ದಿವಿಜ ಲೋಕದಲಿ
ಯಾರುಂಟು ಸಮಬಲರು ನಮಗಿಂದು ಭಾವಿಸಲು
ಕುಶಲದಿಂದಿರುವರೇ ಸುರನಾರಿಯರೆಲ್ಲ !
ಯಾವನೋ ನರಾಧಮನೊರ್ವ ಬಂದಿಹನಂತೆ
ಅಮರಾವತೀಪುರಕೆ ಕಳೆದ ಹುಣ್ಣಿಮೆಯ ದಿನ
ಆಕಾಶಗಂಗಾ ತಟದಲಿದ್ದ ದಾನವರ
ಸೇನೆಯನು ನಿರ್ನಿಮಿತ್ತದಿಂದಲಿ ಘಾತಿಸಿದ
ನೆಂಬ ವಾರ್ತೆಯನು ಕೇಳಿ ವೈರಕ್ತ ಬಿಸಿಗೊಂಡು
ಕುದಿಯುತಿದೆ ; ವಿಲಪಾನಮ ಸೈನ್ಯವನು ಕಾಲು

ಗಲ್ಲಪ ಹಸು ಮಕ್ಕಳಿಂದರಿತನೋ ! ದೇವೇಂದ್ರ !
ಅಮರಾಪತಿಯನು ಮುತ್ತಿ ದಿವಿಜರನು ಸದೆಬಡಿದು
ಆನಗರಿಯನು ಕಿತ್ತು ತಂದದ್ದು ವೆನ್ನು ಜಲಧಿ
ಮಧ್ಯದಲಿ ರಣಭೇರಿ ಮೊಳಗಲಿಂದೇ ದೈತ್ಯ
ದಾನವರ ರಾಕ್ಷಸರ ಸೇನಾ ಶಿಬಿರಗಳಲಿ

**ದೇವಾಂತಕ**—(ಎದ್ದು ನಿಂತು)
ಮಹದಾಜ್ಞೆ !

**ಸೇನಾಪತಿ**—(ಎದ್ದು ವಂದಿಸಿ)
ಆಜ್ಞೆಯನು ನಡಸುವೆನು ಶೀಘ್ರದಲಿ
(ತೆರಳುವನು) (ತೆರೆಯಲ್ಲಿ ರಣ ಕೋಲಾಹಲ)

**ಪ್ರತೀಹಾರಿ**—(ಪ್ರವೇಶಿಸಿ) (ಕೈಮುಗಿದು)
ದೇವಗುರು ಆಚಾರ್ಯ ಬೃಹಸ್ಪತಿ ಬರುತಿಹರು !

**ರಾಕ್ಷಸೇಂದ್ರ**—ಬರಬಹುದು; ಶುಕ್ರಾಚಾರ್ಯವರ್ಯರೆ !
ಆಚಾರ್ಯ ಬೃಹಸ್ಪತಿಗೆ ಸುಸ್ವಾಗತವಿರಲಿ !

**ಶುಕ್ರಾಚಾರ್ಯ**—(ಎದ್ದು ಬೃಹಸ್ಪತಿ ಆಚಾರ್ಯರನ್ನು ಗೌರವದಿಂದ ಸ್ವಾಗತಿಸುತ್ತಾನೆ.)

**ರಾಕ್ಷಸೇಂದ್ರ**—(ಎದ್ದು) ಅನಂತಪ್ರಣಾಮಗಳು ದೇವಗುರುವರ್ಯರಿಗೆ !

**ಬೃಹಸ್ಪತಿ**—ಧರ್ಮಾಭಿ ವೃದ್ಧಿರಸ್ತು ! ರಾಕ್ಷಸರಾಜೇಂದ್ರ !

**ಶುಕ್ರಾಚಾರ್ಯ**—ಸುಸ್ವಾಗತಂ ದೇವ ಗುರುವರ್ಯ ! ದಯಮಾಡಿ !

**ಬೃಹಸ್ಪತಿ**—(ಶುಕ್ರಾಚಾರ್ಯರಿಗೆ ಕೈ ಮುಗಿದು)
ಧನ್ಯೋಽಸ್ಮಿ ! ಮಹಾದಾನವಾಚಾರ್ಯದೇವಾ !

ಮಂತ್ರೀಶ—ಚಿತ್ತೈಸಿ ಪೀಠದಲಿ ಮಂಡಿಸಿರಿ ಮುನಿದೇವ !

ಬೃಹಸ್ಪತಿ—ತಥಾಸ್ತು ! (ಆಸನಾಸೀನನಾಗುವನು)

ರಾಕ್ಷಸೇಂದ್ರ—ಬಂದಹದನೇನು ? ತಂದಿರುವ ಸುದ್ದಿಯದೇನು ?
(ತೆರೆಯಲ್ಲಿ ರಣಭೇರಿಯ ನಿನಾದ)

ಬೃಹಸ್ಪತಿ—(ಆಲಿಸಿ)
ಏನಿಂದು ರಣಬೇರಿ ಮೊಳಗುತಿಡೆ ನಗರದಲಿ
ಯಾವವೈರಿಯ ರಾಜ್ಯವನು ಮುತ್ತುವುದೊ ಅಸುರ
ಸೇನಾಬಲ ! ಅಮರಾಪತಿಯತ್ತ ಗುರಿಯಿಹುದೊ !

ರಾಕ್ಷಸೇಂದ್ರ—(ನಕ್ಕು)
ಎಷ್ಟಾದರಾಗಲಿ ಬೃಹಸ್ಪತಿಯು ಬುದ್ಧಿಯೇ
ಬುದ್ಧಿ ! ಸರಿಯಾದ ಊಹೆಯಿದು ಆಚಾರ್ಯರೇ !

ಬೃಹಸ್ಪತಿ—ನಾನಿಂದು ದೇವರಾಕ್ಷಸ ಸಂಧಿಕಾರ್ಯದಲಿ
ಬಂದಿಹೆನು ದೇವೇಂದ್ರನಾಜ್ಞೆಯಲಿ ಪ್ರತ್ಯಕ್ಷ
ಮಾತುಕತೆ ಸರ್ವಸಮ್ಮತವೆಂಬನೀತಿಯಲಿ !

ರಾಕ್ಷಸೇಂದ್ರ—ನಮಗೇಕೆ ಸಂಧಿ ಗಿಂಧಿಯಮಾತು ದಿವಿಜರಲಿ
ಪ್ರಬಲವೀರರು ದೇವ ಸೈನಿಕರು ! ದಾನವರು
ಎಂದೆಂದು ಸಮರಲ್ಲ ಯುದ್ಧದಲಿ ಎದುರಿಸಲು !
ಆದರೇಂ ! ಆಜನ್ಮ ವೈರಿಗಳು ಗೀರ್ವಾಣ
ರೆಂಬುದನು ಮರೆತಿಲ್ಲ ನಾವೆಂದು ಆಚಾರ್ಯ !

ಬೃಹಸ್ಪತಿ—ಸುರರೆಂದು ರಾಕ್ಷಸರ ರಾಜ್ಯದಲಿ ಆಕ್ರಮಣ
ನಡಸಿಲ್ಲ. ಆತ್ಮರಕ್ಷಣೆಯಲ್ಲಿ ಕಾದಾಡಿ
ದುಡಿಯುವರು ಸಂಗ್ರಾಮ ರಂಗದಲಿ ನೆನಪಿರಲಿ
ಭೂಸ್ವರ್ಗ ಸೀಮಾರೇಖೆಯನು ದಾಟದಂತಿರೆ
ಉಭಯ ರಾಜರಲಿ ಒಪ್ಪಂದವಾಗಲಿಂದುದಿಂ

ಸುಮುನಸರ ಆಕಾಂಕ್ಷೆ ಯುದ್ಧ ಭಯವೇನಿಲ್ಲ
ನನಗೆಂದು ನಿಮ್ಮಿಂದ ದೈವಕೃಪೆಯಿರುವಲ್ಲಿ.

ರಾಕ್ಷಸೇಂದ್ರ—ನಾವೇನು ಕೈಗೆ ಬಳೆ ತೊಟ್ಟು ಸೀರೆಯನುಟ್ಟು
ಮುಸುಕಿಟ್ಟ ನಾರಿಯರು ಎಂದೆಣಿಸಿದರೋ ಸುರರು !
ಅಪಮಾನ ಗೈದವರು ಸಂಧಿಯನು ಬಯಸುವರೊ !

ಬೃಹಸ್ಪತಿ—ಸಾವಧಾನ ಚಿತ್ತದಲಿ ಲಾಲಿಸಿದರೆ ವಿಷಯ
ಮನವರಿಕೆಯಾದೀತು ! ಅರುಹುವೆನು ಸಂಗತಿಯ
ಕಳೆದ ಹುಣ್ಣಿಮೆಯ ದಿನ ಸುರಕನ್ಯೆಯರೆಲ್ಲರು
ದಿವಿಜಗಂಗೆಯಲಿ ನೀರಾಟವಾಡುತ್ತಿದ್ದರು
ಹರ್ಷಾನುರಾಗದಲಿ ಆ ಸಮಯದಲಿ ನಿಮ್ಮ
ದಾನವ ತರುಣರಲ್ಲಿ ಹೊಂಚುಹಾಕುತಲಿದ್ದು
ಬಾಲೆಯರ ವಸ್ತ್ರಕಂಚುಕಗಳನು ಬಚ್ಚಿಟ್ಟು
ಕೀಟಲೆಯ ಮಾಡಿದರು ನಕ್ಕು ಗೇಲಿಯಲಿ ಕುಣಿ
ದಾಡಿದರು ! ಸುರವಧೂಗಣ ನಾಚಿ ಭಯದಿಂದ
ಬೊಬ್ಬಿಟ್ಟು ಕಿರುಚಿದರು ರಕ್ಷಣೆಯ ಬೇಡಿದರು

ರಾಕ್ಷಸೇಂದ್ರ—(ನಗುತ್ತ)
ಆಹಾ ಇದಲ್ಲವೇ ತಾರುಣ್ಯ ಮಧುಗಾನ !

ಶುಕ್ರಾಚಾರ್ಯ—ಪಾಪ ! ಅಬಲೆಯರ ಗತಿಯೇನಾಯ್ತು

ಬೃಹಸ್ಪತಿ—ಗತಿಯೇನು ? ಹೆಂಗಳೆಯರೆಲ್ಲ ನೀರಿನಲ್ಲಿಯೆ
ನಿಂತು ಚೀರಿದರು ಅರಚಿದರು ಕೂಗಿದರು ದೆಸೆ
ದೆಸೆಗೆ ಬಾಯ್ಬಿಟ್ಟು ಮಾನರಕ್ಷಣೆಗಾಗಿಯೇ !

ಶುಕ್ರಾಚಾರ್ಯ—ಆಮೇಲೆ ? ಯಾರು ರಕ್ಷಿಸಿದರು ಅಬಲೆಯರನು ?

ಬೃಹಸ್ಪತಿ—'ಆಪತ್ತಿನಲಿ ಆದವನೆ ನಂಟ' ಎಂಬಂತೆ

ದೂರದಲಿ ವನವಿಹಾರದಲಿದ್ದ ಅರ್ಜುನನು
ನಾರಿಯರ ಆರ್ತನಾದವನು ಕೇಳಿದಾಕ್ಷಣ
ಬಾಣವನು ಹೂಡಿ ಗಾಂಡೀವದಲಿ ಗುರಿಯಿಟ್ಟು
ಶರವರ್ಷ ಕರೆಯುತ್ತ ರಾಕ್ಷಸರ ತಂಡವನು
ದೆಸೆಗೆಡಿಸಿ ಓಡಿಸಿದ ನೆಂಬುದಿದು ನಿಶ್ಚಯಂ.
ನಿಮಗೇಕೆ ವೃಥಾದಿವಿಜರಲಿ ಹಗೆತನದಾಟ !
ಅಪರಾಧವಿನಿತಿಲ್ಲ ಸುಮನಸರ ಗಡಣದಲಿ
ದುಡುಕಲೇತಕೆ ನೀವು ಆದುದಾಯ್ತು ವಿಷಾದ
ಭಾವದಲಿ ನೀವು ಒಪ್ಪಿದರೆ ಸಂಧಿಯಾಗಲಿ
ದೇವರಾಜ್ಯದಗಡಿಯ ಸುರರೆಂದು ಅತಿಕ್ರಮಣ
ಮಾಡದೆಯೆ ನಮ್ಮಲ್ಲಿ ನಿಮ್ಮಲ್ಲಿ ಒಪ್ಪಂದ
ವಾದಲ್ಲಿ ಉಭಯ ರಾಜ್ಯಕ್ಷೇಮವೆಂಬುದನು
ದೇವೇಂದ್ರ ತಿಳಿದಿಹನು ನೀವು ಒಪ್ಪಿದರಾಯ್ತು
ಕಳಿಸಿಕೊಡಿ ನಿಮ್ಮ ಗುರು ಶುಕ್ರಾಚಾರ್ಯರನು ಸುರ
ರಾಜ್ಯದಾಸ್ಥಾನಕಿಂದು ಸಂಧಿವಿಗ್ರಹ ಮನೋ
ಭಾವದಲಿ ಸಂಧಿಯಾಗಲಿ ಉಭಯ ರಾಜರಲಿ

ಶುಕ್ರಾಚಾರ್ಯ—ಬೃಹಸ್ಪತಿಯ ಮಾತಿನಲುಂಟು ರಾಜನೀತಿಯು
ನಿವಾತ ಕವಚರಾಧಿಪನಿಗಿಂದು ದೇವೇಂದ್ರ
ಮಿತ್ರನಂತಿಹನು ಕಾಲಕೇಯರನೆರವಂತಿರಲಿ
ಈ ಉಭಯ ರಾಜ್ಯಗಳ ಅಂತರ್ವ್ಯವಹಾರದ
ಹಿನ್ನೆಲೆಯಲಿ ಇನ್ನೊಂದು ಪ್ರಬಲಗಣರಾಜ್ಯದ
ಕೈವಾಡವಿರದಂತೆ ಪರಸ್ಪರ ಹಿತರೆನಿಸಿ
ಬಾಳಿದರೆ ಸುಕ್ಷೇಮವೆಂಬುದನು ತಿಳಿದಿಹೆನು

ರಾಕ್ಷಸೇಂದ್ರ—ಲೇಸನಾಡಿದಿರಿ ಶುಕ್ರಾಚಾರ್ಯವರ್ಯರೆ !
ಮೂರನೆಯ ನೆರವಿಲ್ಲದಂತೆಯೆ ಗೀರ್ವಾಣ
ದಾನವರ ಮೈತ್ರಿಯಿರಲೆಂಬುದನು ಒಪ್ಪಿದೆವು

ಆ ಅರ್ಜುನನೆಂಬುವವನಾರು ? ಅವನೇಕೆ ಸುರ
ಕನ್ಯೆಯರ ರಕ್ಷಣೆಗೆ ಬಂದಾಯ್ತು ! ಅಪರಾಧ
ವರಿಯದೆಯೆ ಸುತ್ತಾಡುತಿದ್ದ ರಾಕ್ಷಸರನಂದು
ಅವನೇಕೆ ಗುರಿಯಿಟ್ಟು ನೋಯಿಸಿದನೆಂಬುದನು
ಯೋಚಿಸಲು ಅವನೆಮ್ಮ ಶುತ್ರುವಾದನೆಂದಾಯ್ತು !
ನಮ್ಮ ಶತ್ರುವಿಗಾಶ್ರಯವಿತ್ತವರು ಅನಿಮಿಷರು
ಅದರಿಂದ ಅವರೆಮಗೆ ಶತ್ರುಗಳು ಎಂದಾಯ್ತು !
ಇದರ ಫಲವನ್ನುಣುವರು ಅನಿಮಿಷರು ಶೀಘ್ರದಲಿ
ನಮಗುಂಟು ಕೈಲಾಸನಾಥ ಪರಶಿವನ ಬಲ !

ಬೃಹಸ್ಪತಿ—ವಿಕ್ರಮಾರ್ಜುನನೆಂದರೆ ವೀರನಾರಾಯಣನ
ಮೈದುನನು ಚಂದ್ರವಂಶದ ಪಾಂಡು ಕುಮಾರನು
ದೇವೇಂದ್ರವರಸಂಭವನು ವೀರಕೌಂತೇಯ
ನೆಂಬುದನು ಮರೆಯದಿರು ದೈತ್ಯೇಂದ್ರ ಪಾಂಡವರು
ಹನ್ನೆರಡು ವರ್ಷವನವಾಸಕಾರಣದಿಂದ
ಹಸ್ತಿನಾವತಿಯ ಬಿಟ್ಟು ಬಂದರು ಸತಿಯೊಡನೆ
ಕಾಡಿನಲಿ ಪೂಜ್ಯವೇದವ್ಯಾಸರುಪದೇಶ
ವಾದಂತೆ ಅರ್ಜುನನು ವೀರತಪಗೈದು ಮಹ
ದೇವನೊಲುಮೆಯಲಿ ಪಡೆದ ಪಾಶುಪತಾಸ್ತ್ರವನು
ದೇವೇಂದ್ರ ಕರೆಸಿದನು ಮಗನೆಂಬ ಪ್ರೀತಿಯಲಿ
ಅವನಿಹನು ಸುರಲೋಕದತಿಥಿಸತ್ಕಾರದಲಿ
ಅನಿರೀಕ್ಷಿತ ಘಟನೆಯಲಿ ಫಲ್ಗುಣನೊದಗಿದನು
ನಾರಿಯರ ಮಾನ ರಕ್ಷಣೆಯ ಸಂದರ್ಭದಲಿ
ಉದ್ದೇಶವಿನಿತಿಲ್ಲ ರಣವೈರವಿನಿತಿಲ್ಲ
ಅರ್ಜುನನು ನಿಮ್ಮ ಹಗೆಯಲ್ಲ ರಣಪ್ರಿಯನಲ್ಲ
ಭಾವಿಸದಿರು ದಿವಿಜರಲಿ ಅಹಿತವನು ವ್ಯರ್ಥ !

ರಾಕ್ಷಸೇಂದ್ರ—ಅಂತಾದೊಡೆಮಗೆ ಒಪ್ಪಿಸಿರಿಂದು ಅರ್ಜುನನ !

ಬೃಹಸ್ಪತಿ—ಅತಿಥಿಯನು ನಿಮಗೊಪ್ಪಿಸಲು ಧರ್ಮವೇ ನಮಗೆ

ರಾಕ್ಷಸೇಂದ್ರ—ನಮ್ಮಲ್ಲಿ ನಿಮ್ಮಲ್ಲಿ ವೈರವೇನೂ ಇಲ್ಲ
ಅದರಿಂದ ನಿಮ್ಮ ಅತಿಥಿಯೆ ನಮ್ಮ ಅತಿಥಿಯೆಂದಂತಾಯ್ತು !

ಬೃಹಸ್ಪತಿ—ಸಂದಿಗ್ಧ ಪರಿಸ್ಥಿತಿ ಉದ್ಭವಿಸಿದಂತಾಯ್ತು !
ರಾಜನೀತಿಯ ಬಲ್ಲ ವರಗುರು ಶುಕ್ರಾಚಾರ್ಯ
ರೆದುರಿನಲಿ ನನಗಿಲ್ಲ ಸಾಮರ್ಥ್ಯ ತಿಳಿಸುವೊಡೆ
ಸಂಧಿಯಾಗದ ಮುನ್ನ ಅತಿಥಿಯನು ಕಳಿಸುವುದು
ತರವಲ್ಲ ! ದೇವೇಂದ್ರನಿಗಿದು ಸಮ್ಮತವಲ್ಲ !

ಶುಕ್ರಾಚಾರ್ಯ—ಗುರು ಬೃಹಸ್ಪತಿಯ ಮಾತಿನಲೇನು ಕೊಂಕಿಲ್ಲ !
ಸಂಧಿಯಾದೊಡೆ ಸ್ನೇಹ ಶಾಶ್ವತವಾದಂತೆ !
ದಾನವರು ಹೆದರಿ ಸುರರ ಸ್ನೇಹವನು ಬಯಸಿ
ಕೇಳಿಲ್ಲ ! ಉಭಯರ ಸುಖಸಾಧನೆಯಿಹುದಿಲ್ಲಿ

ರಾಕ್ಷಸೇಂದ್ರ—ಆ ಮಾತು ಅಂತಿರಲಿ ! ದಿವಿಜರಿಗೆ ನಮ್ಮಲ್ಲಿ
ನಂಬುಗೆಯೆ ಇಲ್ಲ ! ದೇವದಾನವರೆಲ್ಲರೂ
ಕಶ್ಯಪಋಷಿ ಪುತ್ರರೆಂಬುದನು ಮರೆತಿಹರೇನೊ !
ನಾವೆಲ್ಲ ದಿತೀದೇವಿಯರ ಸಂತಾನಕುಲ
ಸಂಜಾತರಾಗಿಹೆವು ಸುರರೆಮ್ಮದಾಯಾದ
ವರ್ಗದಲಿಹರು ! ಜ್ಞಾತಿಮಾತ್ಸರ್ಯ ತುಂಬಿಹುದು
ಅದಿತಿ ಪುತ್ರಶ್ರೇಣಿಯಲಿ ಸಂಧಾನಕೆಡೆಯಿಲ್ಲ
ಅತಿಥಿ ಸತ್ಕಾರವಾಗಲಿ ಸಮರಭೂಮಿಯಲಿ
ನಿಮ್ಮದಾರಿ ನಿಮಗಿರಲಿ ಸಂಗ್ರಾಮ ನಮಗಿರಲಿ

ಬೃಹಸ್ಪತಿ—ತಥಾಸ್ತು ! ಮೀರುವವರು ಯಾರು ದೈವಗತಿಯನು
ಕೆರಳಿ ಅರ್ಜುನನಂಬು ಹಳಚುವೊಡೆರಿಪುಗಳನು
ಸಮರದಲಿ ಸತ್ಕರಿಸಿ ಅತಿಥಿಯನು ಬೇಗನೆ !
ಅಮರಾವತಿಯತ್ತ ತೆರಳುವೆವು ನಾವೀಗ (ತೆರೆ ಬೀಳುವುದು)

(ತೆರೆಯ ಮುಂದೆ)

ಪುಷ್ಪ—(ಪ್ರವೇಶಿಸಿ)
ನೋಡಿದೆಯ ! ಚಿತ್ರಚೂಡ ! ಆ ಪಾಶುಪತಾಸ್ತ್ರ
ಬಲದಿಂದ ನಿರ್ನಾಮರಾದರು ಕೊಳಗುಳದಲಿ
ನಿವಾತಕವಚರು ರಣಭೂಮಿಯಲಿ ಅರ್ಜುನನ
ಮಹಾಸ್ತ್ರ ಪ್ರಯೋಗಕರ ಕೌಶಲಕತದಿಂದ
ಪರಶಿವನ ವರದಿಂದ ಅಜೇಯನೆನಿಸಿದನಾ ಧನಂಜಯ

ಚಿತ್ರ—ಮುಂದೆ ಕೌರವ ಪಾಂಡವರ ಯುದ್ಧ ನಡೆಯಲಿದೆ
ಕುರುಕ್ಷೇತ್ರ ರಣಭೂಮಿಯಲಿ ಶ್ರೀಕೃಷ್ಣ ಧುರ
ಧೀರ ಪಾರ್ಥರೊಂದಾಗಿ ಜಯಿಸುವರು ಶತ್ರುಗಳ

ಪುಷ್ಪ—ಆ ಪಾಶುಪತಾಸ್ತ್ರ ಪ್ರಯೋಗದಲಿ ಬೃಹದ್ರಥ
ಮತ್ತೆ ಕಲಿಕರ್ಣ ಮೊದಲಾದ ವೀರಗಣವೆಲ್ಲ
ಮಡಿಯುವುದು ; ಅರ್ಜುನನ ತಪಃಫಲ ಸಿದ್ಧಿಪುದು

ಚಿತ್ರ—(ಕೆಳಗೆ ನೋಡುತ್ತ)
ನೋಡಲ್ಲಿ ದೇವರಥದಲಿ ಕುಳಿತು ಅರ್ಜುನನು
ಪಯಣಗೈಯ್ಯುತಿಹನು ತಿರೆಯ ದಾರಿಯಲಿ ಹರ್ಷ
ಚಿತ್ತದಲಿ ಕಾಮ್ಯಕವದತ್ತ ಸೋದರರ
ಕಾಂಬತವಕದಲಿ ; ವರ್ಷ ಐದಾಯ್ತಿಲ್ಲಿ

ಪುಷ್ಪ—ಅಡಿಗಡಿಗೆ ಮಂಗಳವು ಸಿದ್ಧಿಸಲಿ ಪಯಣದಲಿ
ದೇವೇಂದ್ರ ತನುಜಾತ ಪಾರ್ಥಂಗೆ

ಚಿತ್ರ— ಶುಭಮಸ್ತು

(ತೆರೆ ಏಳುವುದು) (ನಿಷ್ಕ್ರಮಣ)

(ಪಾಂಡವರ ಪರ್ಣಶಾಲೆ)

ಧರ್ಮರಾಯ—ಧೌಮ್ಯರೇ ಬಲಗಣ್ಣು ಮಿಡಿಯುತಿದೆ ಬಲಭುಜವು
ಅದುರುತಿದೆ

ಧೌಮ್ಯ— ಶುಭವಾರ್ತೆ ಬರುಸಂತೆ ತೋರುತಿದೆ

ದ್ರೌಪದಿ—(ಹರ್ಷ)
ಅರ್ಜುನನು ಬಂದಂದು ಶುಭವೆಂದು ತಿಳಿಯುವೆನು

ಭೀಮ—(ತಲೆಯೆತ್ತಿ)
ದಿವ್ಯರಥವಿಳಿಯುತಿದೆ ಆಗಸದ ದಾರಿಯಲಿ
ವಾಯುವೇಗದಲಿ

ದ್ರೌಪದಿ— ಬಂದಪನೇನೊ ಅರ್ಜುನನು !

ಸಹದೇವ—(ಉತ್ಸಾಹ)
ಕುಳಿತಿಹನು ದೇವರಥದಲ್ಲಿ ಕಲಿ ಧನಂಜಯ !

ನಕುಲ—ನಿಶ್ಚಯಂ ಅರ್ಜುನಂ ಬಂದಪಂ ಜಯನುಕ್ಕಿ
(ಎಲ್ಲರೂ ಕಾತುರದಿಂದ ನೋಡುವರು)

ಧೌಮ್ಯ—(ಮುತ್ರಾಕ್ಷತೆಯನ್ನು ಹಿಡಿದು)
ಧರೆಗೆಳಿದನರ್ಜುನನು ದೇವರಥದಿಂದಲ್ಲಿ
ಎಲೆವನೆಯ ಕಾಸಾರ ತೀರದಲಿ

ನಕುಲ ಸಹದೇವ— ನಿಶ್ಚಯಂ

ಅರ್ಜುನ—(ಪ್ರವೇಶಿಸಿ) (ಧರ್ಮರಾಜ ಭೀಮರಿಗೆ ವಂದಿಸಿ, ನಕುಲಸಹದೇವರನ್ನು ಆಶೀರ್ವದಿಸಿ, ಕಾಲಿಗೆರಗಿದ ದ್ರೌಪದಿಯನ್ನು ಪ್ರೀತಿಯಿಂದ ಹಿಡಿದೆತ್ತಿ)
ಅಗ್ರಜನೆ ! ಸುಕ್ಷೇಮವೇ ನೀವು ಕಾಡಿನಲಿ,

ಧರ್ಮರಾಯ—ಶ್ರೀ ಹರಿಯ ಕೃಪೆಯಿಂದ ಸುಕ್ಷೇಮ ನಾವೆಲ್ಲ

ದ್ರೌಪದಿ—(ಅರ್ಜುನನಿಗೆ ಆರತಿಯನ್ನು ಎತ್ತಿ ಓಕುಳಿಯನ್ನು ನೀವಾಳಿಸಿ ಚೆಲ್ಲುವಳು)

(ಆಕಾಶದಿಂದ ಪುಷ್ಪವೃಷ್ಟಿ)

ಎಲ್ಲರೂ—ಪರಮಾತ್ಮ ಶಂಕರಂ ಪಾಲಿಸುಗೆ ಲೋಕವಂ

(ತೆರೆ ಬೀಳುವುದು)

## ಸಂಪೂರ್ಣಂ

ಮೈಸೂರು
ತಾ. 15_6_73

ಮುದಗೆರೆ ಓ. ಎನ್. ಲಿಂಗಣ್ಣಯ್ಯ

# ಅನುಬಂಧ

## ಕಥಾಸಾರಾಂಶ

"ಪಾಶುಪತಾಸ್ತ್ರ" ಒಂದು ನಾಟಕ. ಈ ರೂಪಕದ ಕಥಾವಸ್ತು ಅತ್ಯಂತ ಪ್ರಾಚೀನವಾದುದು ; ಸುಪ್ರಸಿದ್ಧವಾದುದು. ಇದರ ಮೂಲ ಕಥೆ ಮಹಾಭಾರತದಲ್ಲಿದೆ. ಮಹಾಕವಿ ಭಾರವಿ ಸಂಸ್ಕೃತದಲ್ಲಿ ಈ ಪ್ರಸಂಗವನ್ನು ಕಿರಾತಾರ್ಜುನೀಯ ಎಂಬ ಕಾವ್ಯದಲ್ಲಿ ನಿರೂಪಿಸಿದ್ದಾನೆ. ಈ ಕಥೆ ಕನ್ನಡದಲ್ಲಿ ಆದಿಪಂಪನ ವಿಕ್ರಮಾರ್ಜುನವಿಜಯ, ಗದುಗಿನನಾರಣಪ್ಪನ ಕರ್ಣಾಟಭಾರತ ಕಥಾಮಂಜರಿ, ವಿರೂಪಾಕ್ಷಪಂಡಿತನ ಚೆನ್ನಬಸವಪುರಾಣ ಇವುಗಳಲ್ಲಿ ಪ್ರಾಸಂಗಿಕವಾಗಿ ಬಂದಿದೆ. ಇದೇ ಕಥೆಯನ್ನು ಷಡಕ್ಷರದೇವ ಶಬರಶಂಕರವಿಳಾಸಂ ಎಂಬ ಕಾವ್ಯದಲ್ಲಿ ಚಿತ್ರಿಸಿರುತ್ತಾನೆ. ಒಬ್ಬೊಬ್ಬ ಕವಿಯೂ ಮೂಲಕಥೆಯಲ್ಲಿ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು ಕಾವ್ಯರಚನೆ ಮಾಡಿರುತ್ತಾನೆ. ಈ ಕಾವ್ಯವಸ್ತುವನ್ನು ಆಧುನಿಕ ಕಾವ್ಯರೀತಿಯಲ್ಲಿ ಈ ಚಿಕ್ಕಕೃತಿಯಲ್ಲಿ ರಚಿಸಲಾಗಿದೆ. ನಾಟಕಕಾರರು ಅಲ್ಲಲ್ಲಿ ಕೆಲವು ಮಾರ್ಪಾಟುಗಳನ್ನು ಅಳವಡಿಸಿಕೊಂಡಿರುತ್ತಾರೆ ; ನೂತನ ಪಾತ್ರಗಳನ್ನು ಸೃಷ್ಟಿಸಿಕೊಂಡಿರುತ್ತಾರೆ. ಎಲ್ಲ ಮಾರ್ಪಾಟುಗಳು ಕಥಾ ಸಂವಿಧಾನದಲ್ಲಿ ಸಮರಸವಾಗಿ ಬೆರೆತುಕೊಂಡಿವೆ.

ಶಿವನು ಕಿರಾತ ರುದ್ರ ಲೀಲೆಯಿಂದ ಧರ್ಮವನ್ನು ಉದ್ಧರಿಸಲು ಅವತರಿಸುತ್ತಾನೆ. ಇದು ಶಿವನ ಹದಿನೈದನೆಯ ಲೀಲೆಯೆಂದು ನಂದೀಶ ಗಣಪತಿಗೆ ತಿಳಿಸುತ್ತಾನೆ. ಅವರಿಬ್ಬರೂ ಕೈಲಾಸಕ್ಕೆ ತೆರಳುತ್ತಾರೆ. ಕೆಲವು ದಿನಗಳಲ್ಲಿಯೇ ಅಗಸ್ತ್ಯ ಮಹರ್ಷಿಯ ನೇತೃತ್ವದಲ್ಲಿ ಋಷಿಗಳ ನಿಯೋಗ ಕೈಲಾಸಗಿರಿಯತ್ತ ಹೊರಡುತ್ತದೆ. ಅವರು ಕಲಿಯುಗದ ಜನ ಜೀವನವನ್ನು ಗಮನದಲ್ಲಿಟ್ಟುಕೊಂಡು ವಿಜ್ಞಾನ ಬಲದಿಂದ ಮಾನವನು ಉನ್ನತಿಯನ್ನು ಪಡೆಯುತ್ತಾನೆಂದೂ ಆಧ್ಯಾತ್ಮಿಕ ಮನೋಬಲ ಕುಂದುವುದೆಂದೂ ಭೂಮಿಯಿಂದ ಚಂದ್ರ ಮಂಡಲಕ್ಕೆ ಕ್ಷಿಪಣಿಯಲ್ಲಿ ಮಾನವನು ಹಾರುತ್ತಾನೆಂದೂ ಜ್ಞಾನಯೋಗದಿಂದ ಅರಿತು ಮಾತನಾಡಿಕೊಳ್ಳುತ್ತಾರೆ.

ಅವರು ಕೈಲಾಸ ಪರ್ವತವನ್ನು ಹತ್ತುತ್ತ ಮೇಲೆ ಮೇಲೆ ಹೋದಂತೆ ತಮ್ಮ ತಾಯ್ನಾಡಿನ ಸೌಂದರ್ಯವನ್ನು ಕಂಡು ತಣಿಯುತ್ತಾರೆ. ಅವರು ಎಲ್ಲ ದಿವ್ಯ ಲೋಕಗಳನ್ನೂ ನೋಡುತ್ತಾರೆ. ಶಿವನು ಮಹಾ ಶಿವಯೋಗ ಸಮಾಧಿಯಲ್ಲಿರುತ್ತಾನೆ. ಅವನು ಮಾರ್ಗಶಿರ ಬಹುಳ ಚತುರ್ದಶಿಯ ದಿನ ಯೋಗದಿಂದ ಬಹಿರ್ಮುಖನಾಗುತ್ತಾನೆ. ಆ ಮಹಾಪೂಜಾ ಸಮಯದಲ್ಲಿ ಸಮಸ್ತ ದೇವತೆಗಳೂ ಕೈಲಾಸದಲ್ಲಿ ಸೇರಿ ಶಿವ ಸಂದರ್ಶನದಿಂದ ಧನ್ಯರಾಗುತ್ತಾರೆ. ಆ ವೇಳೆಗೆ ಈ ಋಷಿಗಳೂ ಒಂದುದಿನ ಮುಂಚಿತವಾಗಿಯೇ ಕೈಲಾಸ ಧಾಮವನ್ನು ಸೇರುತ್ತಾರೆ. ನಂದೀಶ ಮತ್ತು ಭೃಂಗೀಶರು ಋಷಿಗಣವನ್ನು ಸ್ವಾಗತಿಸುತ್ತಾರೆ. ಅವರು ಮರುದಿನ ಶಿವ–ಪಾರ್ವತಿಯರನ್ನು ದರ್ಶನ ಮಾಡುತ್ತಾರೆ. ಆಗ ಅವರು ತಮ್ಮ ತಪೋಭೂಮಿಯಲ್ಲಿ ಯಾವನೋ ಹೊಸಬ ತರುಣ ಮುನಿ ಬಂದು ಉಗ್ರ ತಪಸ್ಸನ್ನು ಮಾಡುತ್ತಿದ್ದಾನೆಂದೂ ಅವನ ತಪಸ್ಸಿನ ಬೇಗೆಯಿಂದ ತಮ್ಮ ಶಾಂತಿ ಭಂಗವಾಗುತ್ತಿದೆಯೆಂದೂ ಆ ಮುನಿಯನ್ನು ಅಪ್ಸರಸ್ತ್ರೀಯರೂ ದೇವೇಂದ್ರನೂ ಪರೀಕ್ಷಿಸಿ ಹೋದರೆಂದೂ ಅವನು ತುಂಬ ಶಿವ ನಿಷ್ಠಾಪರನಾಗಿರುವನೆಂದೂ ಅರಿಕೆ ಮಾಡುತ್ತಾರೆ. ಅಲ್ಲದೆ, ಆ ತರುಣ ಮುನಿಯನ್ನು ಅಲ್ಲಿಂದ ಬೇರೆ ಕಡೆಗೆ ಕಳಿಸಬೇಕೆಂದೂ ಇಲ್ಲವೆ ಅವರಿಗೆ ಪ್ರತ್ಯೇಕ ತಪೋಭೂಮಿಯನ್ನು ತೋರಿಸಬೇಕೆಂದೂ ಆ ಋಷಿಗಳು ಬೇಡಿಕೊಳ್ಳುತ್ತಾರೆ. ಅದನ್ನು ಕೇಳಿ ಪರಮೇಶ್ವರನು ಮಂದಹಾಸದಿಂದ ಅವರನ್ನು ಕುರಿತು– ಅಲ್ಲಿ ತಪಸ್ಸುಮಾಡುವವನು ಪಾಂಡು ಪುತ್ರನಾದ ಅರ್ಜುನನು, ವೇದವ್ಯಾಸರ ಉಪದೇಶದಿಂದ ಅವನು ನನ್ನನ್ನು ಕುರಿತು ತಪಸ್ಸು ಮಾಡುತ್ತಿದ್ದಾನೆ. ನಾನು ಕಿರಾತ ರುದ್ರ ಲೀಲೆಯಿಂದ ಭೂಮಿಗಿಳಿದು ಅನುಗ್ರಹಿಸುತ್ತೇನೆ. ಇದರ ಪುರಾವೃತ್ತವನ್ನು ಅರಿಯಲು ನಿಮಗೆ ದಿವ್ಯ ಚಕ್ಷುಸ್ಸನ್ನು ಅನುಗ್ರಹಿಸುತ್ತೇನೆ. ನೀವು ಇಲ್ಲಿಯೇ ಕೈಲಾಸಧಾಮದಲ್ಲಿ ಕುಳಿತು ಆ ಎಲ್ಲ ಘಟನಾವಳಿಯನ್ನು ನೋಡಬಹುದು ಎಂದು ಶಿವನು ಹೇಳುತ್ತಾನೆ.

"ಪಾಂಡವರು ಕಪಟದ್ಯೂತದಲ್ಲಿ ಕೌರವರಿಗೆ ರಾಜ್ಯವನ್ನು ಸೋತು ಹನ್ನೆರಡು ವರ್ಷ ವನವಾಸದಲ್ಲಿತ್ತಾರೆ. ಆ ಕಾಲದಲ್ಲಿ ದ್ರೌಪದಿಯು ಧರ್ಮರಾಯನನ್ನು ಒಂದುದಿನ ನಾನಾ ರೀತಿಯಾಗಿ ಮೂದಲಿಸುತ್ತಾಳೆ.

ದುಶ್ಶಾಸನನಿಂದ ತನಗಾದ ಪರಾಭವವನ್ನು ನೆನೆದು ದುಃಖಿಸುತ್ತಾಳೆ. ಆ ಸಮಯದಲ್ಲಿ ವೇದವ್ಯಾಸರು ಅರ್ಜುನನಿಗೆ ದಿವ್ಯ ಮಂತ್ರವನ್ನು ಉಪದೇಶಿಸಿ, ಇಂದ್ರಕೀಲಗಿರಿಗೆ ಹೋಗಿ ಶಿವನನ್ನು ಕುರಿತು ತಪಸ್ಸುಮಾಡಿ, ಶಿವನಿಂದ ಪಾಶುಪತಾಸ್ತ್ರವನ್ನು ಪಡೆಯುವಂತೆಹೇಳಿ, ಅರ್ಜುನನನ್ನು ಅನುಗ್ರಹಿಸುತ್ತಾನೆ. ಅರ್ಜುನನು ಅದರಂತೆಯೇಇಂದ್ರಕೀಲ ಪರ್ವತ ಪ್ರಾಂತಕ್ಕೆ ಹೋಗಿ ತಪೋಮಗ್ನನಾಗುತ್ತಾನೆ. ಧೌಮ್ಯರ ಶಿಷ್ಯ ಸೌಮ್ಯಗುಣನೆಂಬ ಬ್ರಹ್ಮಚಾರಿ ಅರ್ಜುನನ ತಪೋನುಷ್ಠಾನದ ನೆರವಿಗಾಗಿ ತಪೋವನದಲ್ಲಿ ಇರುತ್ತಾನೆ. ಪಾರ್ಥನ ಉಗ್ರೋಗ್ರ ತಪಸ್ಸನ್ನು ಪರೀಕ್ಷಿಸಲು ದೇವೇಂದ್ರನು ಚಿತ್ರಚೂಡ ಮತ್ತು ಪುಷ್ಪರಥ ಎಂಬ ಇಬ್ಬರು ಗಂಧರ್ವರನ್ನು ಕಳಿಸಿರುತ್ತಾನೆ. ಅರ್ಜುನನ ತಪಸ್ಸು ವರ್ಧಿಸುತ್ತದೆ. ಧೌಮ್ಯರ ಶಿಷ್ಯ ಸೌಮ್ಯ ಕಾಡುಬೇಡರ ದೊರೆಯ ಮಗಳಾದ ವನವೇಣಿಯೆಂಬ ಕನ್ಯೆಯಲ್ಲಿ ಅನುರಕ್ತನಾಗುತ್ತಾನೆ. ದೇವಲೋಕದ ಅಪ್ಸರ ಸ್ತ್ರೀಯರು ದೇವೇಂದ್ರನ ಅನುಮತಿಯಿಂದ ಅರ್ಜುನನ ತಪೋಭಂಗ ಮಾಡಲು ತಮ್ಮ ನಾಟ್ಯಗಾನ ಹಾವಭಾವ ವಿಲಾಸಗಳಿಂದ ಪ್ರಯತ್ನಿಸುತ್ತಾರೆ. ಕೊನೆಗೆ ಇಂದ್ರನೇ ಜಂಗಮವೇಷದಿಂದ ಬಂದು ಅರ್ಜುನನನ್ನು ಪರೀಕ್ಷಿಸುತ್ತಾನೆ. ಅವನ ನಿಷ್ಠೆಯನ್ನು ಕಂಡು ಸಂತೋಷದಿಂದ ಆಶೀರ್ವದಿಸಿ ಹೋಗುತ್ತಾನೆ. ಶಿವನು ಋಷಿಗಳಿಗೆ ಅಭಯ ಪ್ರದಾನ ಮಾಡಿದಂತೆ ಕಿರಾತವೇಷದಿಂದ ಇಂದ್ರಕೀಲಪರ್ವತ ಪ್ರಾಂತಕ್ಕೆ ಬರುತ್ತಾನೆ. ಎಲ್ಲ ಪ್ರಮಥರೂ, ರುದ್ರಕನ್ಯೆಯರೂ, ಪಾರ್ವತೀದೇವಿಯೂ ಕಿರಾತವೇಷದಿಂದ ಶಿವನೊಂದಿಗೆ ಇರುತ್ತಾರೆ. ಕಿರಾತಗಣ ಕಾಡಿನಲ್ಲಿ ಬೇಟೆಯಾಡುತ್ತ ಕೂಗುತ್ತ ಗದ್ದಲ ಮಾಡುತ್ತ ನುಗ್ಗುತ್ತಾರೆ. ಆ ಕಾಡಿನಲ್ಲಿ ವಾಸವಾಗಿದ್ದ ಮೂಕದಾನವನೆಂಬ ರಾಕ್ಷಸನು ಕಾಡುಹಂದಿಯ ರೂಪದಿಂದ ಆರ್ಭಟಿಸುತ್ತ ಬೇಡರಪಡೆಗಳತ್ತ ನುಗ್ಗುತ್ತಾನೆ. ಕಿರಾತರುದ್ರನು ಆ ಹಂದಿಯತ್ತ ಗುರಿಯಿಟ್ಟು ಬಾಣಪ್ರಯೋಗ ಮಾಡುತ್ತಾನೆ. ಅದು ಆ ಬಾಣದ ಏಟಿಗೆ ತತ್ತರಿಸಿ ಬಿದ್ದು ಮತ್ತೆ ಎದ್ದು ಅರ್ಜುನನು ತಪಸ್ಸು ಮಾಡುತ್ತಿದ್ದ ತಪೋವನದ ಕಡೆಗೆ ನುಗ್ಗುತ್ತದೆ. ಅಲ್ಲಿದ್ದ ತಪಸ್ವಿಗಳಿಗೆ ತೊಂದರೆಯಾದೀತೆಂದು ಆಗ ಅರ್ಜುನನು ಆ ಹಂದಿಯನ್ನು ಗುರಿಯಿಟ್ಟು ಬಾಣಪ್ರಯೋಗ ಮಾಡುತ್ತಾನೆ. ಅರ್ಜುನನ ಬಾಣತಗುಲಿ ಅದು ಸತ್ತುಬೀಳುತ್ತದೆ. ಅಷ್ಟರಲ್ಲಿಯೇ ಕಿರಾತರುದ್ರನು ತನ್ನ ಬೇಡರ ಪಡೆಯೊಡನೆ ಧಾವಿಸಿ

ಬಂದು ಆ ಹಂದಿ ತನ್ನ ಬಾಣದಿಂದ ಹತವಾಯಿತೆಂದು ಹೇಳಿ ಆ ಬೇಟೆಯನ್ನು ಎತ್ತಿಕೊಂಡುಹೋಗುವಂತೆ ತಿಳಿಸುತ್ತಾನೆ. ಆ ಹಂದಿಯನ್ನು ಸಂಹರಿಸಿದವನು ತಾನೆಂದು ಅರ್ಜುನನು ಪ್ರತಿಭಟಿಸುತ್ತಾನೆ. ಕಿರಾತರುದ್ರನಿಗೂ ಅರ್ಜುನ ಮುನಿಗೂ ವಾಗ್ವಾದವಾಗುತ್ತದೆ. ಪರಸ್ಪರ ಕಾಳಗವೂ ನಡೆಯುತ್ತದೆ. ಕೊನೆಗೆ ಮಲ್ಲಯುದ್ಧವೂ ಆಗುತ್ತದೆ. ಎಲ್ಲ ಯುದ್ಧಗಳಲ್ಲಿಯೂ ಅರ್ಜುನನು ಸೋಲುತ್ತಾನೆ. ಎಂದೂ ಸೋಲರಿಯದ ಅರ್ಜುನನು ದಿಙ್ಮೂಢನಾಗುತ್ತಾನೆ. ಅವನು ಮಳಲು ಲಿಂಗವನ್ನು ನಾನಾವಿಧ ಪುಷ್ಪಗಳಿಂದ ಪೂಜಿಸಿ ಶಿವನ ಕೃಪೆಯನ್ನು ಪಡೆದು ಬರುವುದಾಗಿ ಕಿರಾತರುದ್ರನಿಗೆ ತಿಳಿಸಿ ಹೋಗುತ್ತಾನೆ. ತಾನು ಮಳಲು ಲಿಂಗದ ಮೇಲಿಟ್ಟಿದ್ದ ಹೂಗಳನ್ನು ಕಿರಾತನ ಮಂಡೆಯಮೇಲೆ ಅವನು ನೋಡುತ್ತಾನೆ. ಅವನಿಗೆ ಆಶ್ಚರ್ಯವಾಯಿತು ! ಶಿವನೇ ಕಿರಾತರೂಪದಿಂದ ಬಂದಿದ್ದಾನೆಂದು ತಿಳಿದು ಅರ್ಜುನನು ಆ ಕಿರಾತನನ್ನು ಅಭಿವಂದಿಸಿ, ಅಪರಾಧವಾಯಿತೆಂದು ಆ ಕಿರಾತನ ಪಾದಗಳಮೇಲೆ ಬೀಳುತ್ತಾನೆ. ಆಗ ಶಿವನು ಪ್ರತ್ಯಕ್ಷನಾಗಿ ಅರ್ಜುನನ್ನು ಪ್ರೀತಿಯಿಂದ ಆಲಂಗಿಸಿ ಅವನ ಇಷ್ಟದಂತೆ ಅವನಿಗೆ ಪಾಶುಪತಾಸ್ತ್ರವನ್ನೂ ಬ್ರಹ್ಮಶಿರೋಸ್ತ್ರವನ್ನೂ' ಕೊಟ್ಟು ಅನುಗ್ರಹಿಸುತ್ತಾನೆ. ಪಾರ್ವತಿಯು ಅರ್ಜುನನ ಸಾಹಸವನ್ನು ಮೆಚ್ಚಿ ಅಂಜನಾಸ್ತ್ರವನ್ನು ಕೊಟ್ಟು ಮನ್ನಿಸುತ್ತಾಳೆ. ಸೌಮ್ಯ ವನವೇಣಿಯರ ವಿವಾಹ ಪಾರ್ವತೀ ಪರಮೇಶ್ವರರ ಸಮಕ್ಷದಲ್ಲಿ ನಡೆಯುತ್ತದೆ. ಅರ್ಜುನನು ಪಾರ್ವತೀ ಪರಮೇಶ್ವರರನ್ನು ಬಲವಂದು ಸಾಷ್ಟಾಂಗ ಪ್ರಣಾಮ ಮಾಡಿ ಅಲ್ಲಿಂದ ತೆರಳುತ್ತಾನೆ. ಶಿವ ಗೌರಿಯರೂ ತಮ್ಮ ಪ್ರಮಥರೊಂದಿಗೆ ಕೈಲಾಸ ಧಾಮದತ್ತ ಹೋಗುತ್ತಾರೆ. ಅಷ್ಟರಲ್ಲಿಯೇ ದೇವೇಂದ್ರ ಕಳಿಸಿದ ರಥ ಭೂಮಿಗಿಳಿದು ಬರುತ್ತದೆ. ಸಾರಥಿ ಮಾತಲಿ ಅರ್ಜುನನನ್ನು ದೇವೇಂದ್ರನ ಆಣತಿಯಂತೆ ಅಮರಾವತಿಗೆ ಕರೆದು ಕೊಂಡು ಹೋಗುತ್ತಾನೆ. ದೇವೇಂದ್ರನ ಆತಿಥ್ಯದಲ್ಲಿ ಅರ್ಜುನ ಐದು ವರ್ಷ ಕಾಲ ದೇವಲೋಕದಲ್ಲಿರುತ್ತಾನೆ. ಊರ್ವಶಿಯಿಂದ ಶಾಪಗ್ರಸ್ತನಾಗುತ್ತಾನೆ. ನಿವಾತಕವಚವನ್ನೂ ಕಾಲಕೇಯರನ್ನೂ ಪಾಶುಪತಾಸ್ತ್ರ ಪ್ರಯೋಗದಿಂದ ಸಂಹರಿಸುತ್ತಾನೆ. ಅರ್ಜುನ ವಿಜಯವನ್ನು ಕೇಳಿ ಪಾಂಡವರು ಸಂತೋಷಪಡುತ್ತಾರೆ. ಪಾಶುಪತಾಸ್ತ್ರದಿಂದ ಭಾರತ ಯುದ್ಧದಲ್ಲಿ ಅರ್ಜುನ ಶತ್ರು ಸಂಹಾರಮಾಡುತ್ತಾನೆ.

## ಈ ಲೇಖಕರು ಬರೆದಿರುವ ಶ್ರೀಶೈಲ ಕುಮಾರೀ ಗ್ರಂಥಮಾಲೆಯ ಇತರ ಪುಸ್ತಕಗಳು

1. ಮುದ್ದು ಕನ್ನಡನಾಡು (ಪದ್ಯ)
2. ಮೈಸೂರು ಒಡೆಯರ ಕಥೆಗಳು
3. ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರು (ಜೀವನ ಚರಿತ್ರೆ)
4. ದವನ (ಕವಿತೆಗಳು)
5. ಜಂಗಮ–ವಿಜಯ (ಏಕಾಂಕ ನಾಟಕ)
6. ಸ್ವಾಮಿ ರಾಮತೀರ್ಥರು (ಜೀವನ ಚರಿತ್ರೆ)
7. ಶ್ರೀ ವಿದ್ಯಾರಣ್ಯರು (ಜೀವನ ವೈಭವ)
8. ಆತ್ಮಜ್ಞಾನಿ ಅಲ್ಲಮ ಪ್ರಭು (ಅಧ್ಯಾತ್ಮ ಜೀವನ)
9. ಮಾಂಗಲ್ಯ (ಕವಿತೆಗಳು)
10. ಕನ್ನಡ ನಾಡಿನ ಇತಿಹಾಸದ ಕಥೆಗಳು
11. ಮಹಾಮಂತ್ರಿ (ಕಾದಂಬರಿ)
12. ಮಹಾರಾಣಿ ಲಕ್ಷ್ಮಮ್ಮಣ್ಣಿಯವರು (ಮೈಸೂರು ಇತಿಹಾಸದ ಘಟನೆಗಳು)
13. ವೈರಾಗ್ಯನಿಧಿ ಅಕ್ಕಮಹಾದೇವಿ
14. ಶಿವಯೋಗಿ ಸಿದ್ಧರಾಮ
15. ರಾಜರ್ಷಿ (ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರ ವ್ಯಕ್ತಿಜೀವನ)
16. ಹೊಂಬಾಳೆ (ಕವಿತೆಗಳು)
17. ಸ್ವಾತಂತ್ರ್ಯ ಮಣಿದೀಪ (ಕಾದಂಬರಿ)
18. ಕಲ್ಲುಗಾಣ (ಕಾದಂಬರಿ)
19. ಜೈನಧರ್ಮಪರಿಚಯ
20. ವಿಶ್ವಜೀವನ
21. ಸಮಾಜ ಪರಿಚಯ
22. ಬಸವಣ್ಣನವರು
23. ನಲ್ಲೂರು ಚೆಲುವೆ (ಕಾದಂಬರಿ)

24. ಚನ್ನಬಸವಣ್ಣ (ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ)
25. ಶೂನ್ಯ ಸಿಂಹಾಸನ (ವೀರಶೈವ ಮಠಗಳ ಚರಿತ್ರೆ)
26. ಗುರುಬಲ (ನಿಜಜೀವನ ವಿಹಾರ)
27. ಸನಾತನ ವೀರಶೈವ
28. ತಪಃಫಲ (ಸರಳರಗಳೆ–ನಾಟಕ)
29. ಎಡೆಯೂರು ತೋಂಟದ ಸಿದ್ಧಲಿಂಗಯತಿ
(ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ)
30. ವೀರಕಂಕಣ (ಕಾದಂಬರಿ)
31. ದಮಯಂತಿ (ನಾಟಕ–ಅಚ್ಚಿನಲ್ಲಿದೆ)
32. ಪಾಶುಪತಾಸ್ತ್ರ (ನಾಟಕ)

## ಅಭಿಪ್ರಾಯ-ದರ್ಶನ

ತಪಃಫಲ ನಾಟಕ—(ಮುನ್ನುಡಿಯಿಂದ)

"ಕವಿತೆ ನಾಟಕ ಜೀವನ ಚರಿತ್ರೆಗಳನ್ನು ರಚಿಸಿ ಭಾಷಣಗಳ ಮೂಲಕ ಸಾಹಿತ್ಯಾಮೃತವನ್ನು ಜನಸಾಮಾನ್ಯಕ್ಕೆ ನೀಡಿ ಕನ್ನಡ ಸಾಹಿತ್ಯಕ್ಕೆ ಈ ಹಲವಾರು ರೀತಿಗಳಲ್ಲಿ ಸೇವೆಸಲ್ಲಿಸಿರುವ ಮಹನೀಯರಿವರು. ಬಿಡುವಿಲ್ಲದ ಆಡಳಿತ ಯಂತ್ರದಲ್ಲಿ ಕೈ ಹಾಕಿಕೊಂಡಿದ್ದರೂ ಸಾಹಿತ್ಯೋಪಾಸನೆಗೆ ಮನಸನ್ನು ತೆತ್ತು ಎರಡನ್ನೂ ನಿಷ್ಠೆಯಿಂದ ದಕ್ಷತೆಯಿಂದ ನಿರ್ವಹಿಸಿದ ವಿರಳ ವ್ಯಕ್ತಿಗಳಲ್ಲಿ ಶ್ರೀ ಲಿಂಗಣ್ಣಯ್ಯನವರೊಬ್ಬರು"

ಮೈಸೂರು
೧೫-೪-೧೯೭೧
ಕುಲಪತಿಭವನ

**ದೇಜಗೌ**
(ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ)